# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೮, ೨೦೧೬ (ಭಾದ್ರಪದ ೧೭, ಶಕ ವರ್ಷ ೧೯೩೮)<br>Bengaluru, Thursday, September 8, 2016 ( Bhadrapada 17, Shaka Varsha 1938) | ಸಂಚಿಕೆ ೩೬<br>Issue 36 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿನಲ್ಲಿ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಎರಡನೇ ಕಂತಿನ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಸಇ 115 ಆಂಆಸ 2016, ದಿನಾಂಕ: 26–04–2016.
2. ಸರ್ಕಾರದ ಆದೇಶ ಸಂಖ್ಯೆ:ಎಫ್.ಡಿ 3 ಟಿಎಫ್‌ಪಿ 2016, ದಿನಾಂಕ:02–04–2016.
3. ಸರ್ಕಾರದ ಸಮಸಂಖ್ಯೆ ಆದೇಶದ ದಿನಾಂಕ: 01–06–2016.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಯಶಸ್ವಿನಿ/5/2016–17, ದಿನಾಂಕ:25–07–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2016–17ನೇ ಸಾಲಿನಲ್ಲಿ ಸಹಕಾರ ಇಲಾಖೆಯಲ್ಲಿ ಯಶಸ್ವಿನಿ ಯೋಜನೆಗಳನ್ನು ಮುಂದುವರೆಸಿದ್ದು, ಲೆಕ್ಕಶೀರ್ಷಿಕೆ 2425–00–108–0–57ರಲ್ಲಿ **₹.** 16911.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕಂಡಿಕೆ (12)ರನ್ವಯ ಮೊದಲ ಮೂರು ಕಂತುಗಳಲ್ಲಿ ಹಣವನ್ನು ತಲಾ ಶೇ25ರಂತೆ ಶೇ.75ರಷ್ಟು ಹಣವನ್ನು ಬಿಡುಗಡೆ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಯೋಜನೆಯ ಅನುದಾನದ ಪೈಕಿ ಮೊದಲನೇ ಕಂತಿನಲ್ಲಿ **₹.**4227.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಎರಡನೇ ಕಂತು **₹.**4227.75 ಲಕ್ಷಗಳನ್ನು ಬಿಡುಗಡೆಗೆ ಕೋರಿರುತ್ತಾರೆ. ಮೊದಲ ಕಂತಿನಲ್ಲಿ ಬಿಡುಗಡೆಯಾಗಿರುವ ಪೂರ್ಣ ಮೊತ್ತ **₹.**4227.75 ಲಕ್ಷಗಳು ಬಳಕೆಯಾಗಿರುವುದಾಗಿ ದೃಢೀಕೃತ ಬಳಕೆ ಪ್ರಮಾಣ ಪತ್ರ ನೀಡಿರುತ್ತಾರೆ. ವಿವರಗಳು ಸಂಕ್ಷಿಪ್ತವಾಗಿ ಕೆಳಕಂಡಂತಿರುತ್ತದೆ.

**ಲೆಕ್ಕಶೀರ್ಷಿಕೆ : 2425–00–108–0–57** **(₹. ಲಕ್ಷಗಳಲ್ಲಿ)**

| ಕ್ರ.ಸಂ | ಲೆಕ್ಕಶೀರ್ಷಿಕೆ | ವಿವರ | ಮಂಜೂರದ ಅನುದಾನ | ಮೊದಲ ಕಂತಿನಲ್ಲಿ ಬಿಡುಗಡೆಯಾಗಿರುವ ಅನುದಾನ | ಬಾಕಿ ಉಳಿದಿರುವ ಅನುದಾನ |
|---|---|---|---|---|---|
| 1 | 2425–00–108–057–059 | ಇತರೆ ಖರ್ಚುಗಳು | 13638.00 | 3409.50 | 10228.50 |
| 2 | 2425–00–108–057–422 | ಪರಿಶಿಷ್ಟ ಜಾತಿ ಉಪಯೋಜನೆ | 1914.00 | 478.50 | 1435.50 |
| 3 | 2425–00–108–057–423 | ಗಿರಿಜನ ಉಪಯೋಜನೆ | 1359.00 | 339.75 | 1019.25 |
| **ಒಟ್ಟು ರೂ.** | | | **16911.00** | **4227.75** | **12683.25** |

ಮೇಲ್ಕಂಡಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 277 ಸಿಎಲ್ಎಸ್ 2016, ಬೆಂಗಳೂರು ದಿನಾಂಕ: 19–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016–17ನೇ ಸಾಲಿಗೆ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು **₹.**4227.75 ಲಕ್ಷಗಳನ್ನು (**₹.** ನಲವತ್ತೆರಡು ಕೋಟಿ ಇಪ್ಪತ್ತೇಳು ಲಕ್ಷದ ಎಪ್ಪತ್ತೈದು ಸಾವಿರಗಳು ಮಾತ್ರ) ಎರಡನೇ ಕಂತಾಗಿ ಲೆಕ್ಕಶೀರ್ಷಿಕೆ **"2425–00–108–0–057"** ಯೋಜನೆ ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ಹೊರಡಿಸಿದೆ.

(ಮೊತ್ತ ₹. ಲಕ್ಷಗಳಲ್ಲಿ)

| ಕ್ರ.ಸಂ | ಲೆಕ್ಕಶೀರ್ಷಿಕೆ | ವಿವರ | ಎರಡನೇ ಕಂತಿನಲ್ಲಿ ಬಿಡುಗಡೆ ಮಾಡಿದ ಮೊತ್ತ |
|---|---|---|---|
| 1 | 2425–00–108–057–059 | ಇತರೆ ಖರ್ಚುಗಳು | 3409.50 |
| 2 | 2425–00–108–057–422 | ಪರಿಶಿಷ್ಟ ಜಾತಿ ಉಪಯೋಜನೆ | 478.50 |
| 3 | 2425–00–108–057–423 | ಗಿರಿಜನ ಉಪಯೋಜನೆ | 339.75 |
| | | **ಒಟ್ಟು** | **4227.75** |

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲುರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ), ಸಹಕಾರ ಸಂಘಗಳ ನಿಬಂಧಕರ ಕಛೇರಿ ಇವರು ಖಜಾನೆಯಿಂದ ಯಶಸ್ವಿನಿ ಯೋಜನೆಗೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಟ್ರಸ್ಟ್‌ನ ಉಳಿತಾಯ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ:02–04–2016ರಲ್ಲಿ ಸರ್ಕಾರದ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 61 ಆಂಆಸ(ಎ) 2016, ದಿನಾಂಕ:16–08–2016 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**PR. 562**

**SC. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ನಗರದ ಕುಡಿಯುವ ನೀರು ಸರಬರಾಜು ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸಿರುವ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ನಅಇ 24ಯುಡಬ್ಲ್ಯೂಎಸ್ 2014, ದಿನಾಂಕ: 04–04–2016.

**ಪ್ರಸ್ತಾವನೆ:**

ಮೇಲೆ ಓದಲಾದ ಬಳ್ಳಾರಿ ಮಹಾನಗರ ಪಾಲಿಕೆಯ ಸಗಟು ನೀರು ಸರಬರಾಜು ವ್ಯವಸ್ಥೆಯನ್ನು ಬಳ್ಳಾರಿ ಮಹಾನಗರ ಪಾಲಿಕೆಯಿಂದ ಕರ್ನಾಟಕ ನಗರ ನೀರು ಮತ್ತು ಒಳಚರಂಡಿ ಮಂಡಳಿ ವಿಭಾಗ. ಬಳ್ಳಾರಿ ರವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ಹಸ್ತಾಂತರಿಸಲು ಆದೇಶಿಸಲಾಗಿತ್ತು. ಹಾಗೂ ಈ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಕೂಡಲೇ ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ತತ್ಸಂಬಂಧವಾಗಿ ಈಗಾಗಲೇ ಉಭಯ ಸಂಸ್ಥೆಗಳು ಮಾಡಿಕೊಂಡ ಒಪ್ಪಂದದಂತೆ ಹಾಗೂ ಕೆಲವು ಷರತ್ತು ಮತ್ತು ನಿಬಂಧನೆಗಳನ್ವಯ ತಕ್ಷಣವೇ ಮಂಡಳಿ ಹಾಗೂ ಬಳ್ಳಾರಿ ಮಹಾನಗರ ಪಾಲಿಕೆಯೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವಂತೆ ಸೂಚಿಸಲಾಗಿತ್ತು.

ದಿನಾಂಕ: 02–05–2016 ರಂದು ನಡೆದ ಪ್ರಗತಿ ಪರಿಶೀಲನಾ ಸಭೆಯಲ್ಲಿ ತೀರ್ಮಾನಿಸಿರುವುದರಿಂದ ಬಳ್ಳಾರಿ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸಮಗ್ರವಾಗಿ ಎದುರಿಸಲು ಬಳ್ಳಾರಿ ಮಹಾನಗರ ಪಾಲಿಕೆ ವತಿಯಿಂದ ಹಿಂಪಡೆದು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ ಕೈಗೊಳ್ಳುವ ಬಗ್ಗೆ ದಿನಾಂಕ: 04–04–2016 ರಂದು ಹೊರಡಿಸಿರುವ ಆದೇಶವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 24 ಯುಡಬ್ಲ್ಯೂಎಸ್ 2014, ಬೆಂಗಳೂರು, ದಿನಾಂಕ:20–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬಳ್ಳಾರಿ ಮಹಾನಗರ ಪಾಲಿಕೆಯ ಸಗಟು ನೀರು ಸರಬರಾಜು ವ್ಯವಸ್ಥೆಯನ್ನು ಬಳ್ಳಾರಿ ಮಹಾನಗರ ಪಾಲಿಕೆಯಿಂದ ಕರ್ನಾಟಕ ನಗರ ನೀರು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸಿ ದಿನಾಂಕ: 04–04–2016 ರಂದು ಹೊರಡಿಸಲಾಗಿರುವ ಆದೇಶವನ್ನು ಹಿಂಪಡೆಯಲಾಗಿದೆ.

**PR. 416**

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,
**ವೈ. ಗೋಪಾಲ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ. (ಮಂಡಳಿ)

## ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ

**ವಿಷಯ :** ನಗರ ಪ್ರದೇಶದ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೆ ಗ್ರಾಮಾಂತರ ಪ್ರದೇಶಗಳಲ್ಲಿರುವಂತೆ ಸೀಮೆಎಣ್ಣೆ ಸಾಗಾಣಿಕ ವೆಚ್ಚ ಪಾವತಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರ ಸಂ. ಸಿಎಫ್ಎಸ್/ಪಿಡಿ/11/ಕೆಒಐಎಲ್/14/2013–14, ದಿನಾಂಕ: 06.09.2013 ಹಾಗೂ 07.01.2014.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖಿತ ಪತ್ರಗಳಲ್ಲಿ ಆಯುಕ್ತರು, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಸೀಮೆಎಣ್ಣೆ ಸಗಟು ನಾಮಿನಿದಾರರು ಹಂಚಿಕೆಯನ್ವಯ ಸೀಮೆಎಣ್ಣೆಯನ್ನು ತೈಲ ಕಂಪನಿಗಳ ಟರ್ಮಿನಲ್‌ಗಳಿಂದ ಎತ್ತುವಳಿ ಮಾಡಿ ರಾಜ್ಯದ ಗ್ರಾಮಾಂತರ ಪ್ರದೇಶಗಳಲ್ಲಿರುವ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೆ ಮನೆ ಬಾಗಿಲಿಗೆ ಸೀಮೆಎಣ್ಣೆ ಪೂರೈಸುತ್ತಿರುತ್ತಾರೆ. ಇದಕ್ಕಾಗಿ ಪ್ರತಿ ಕೆ.ಎಲ್. ಸೀಮೆಎಣ್ಣೆಗೆ ₹.460/- ರಂತೆ ಸಾಗಾಣಿಕಾ ವೆಚ್ಚವನ್ನು ಸಗಟು ಸೀಮೆಎಣ್ಣೆ ನಾಮಿನಿದಾರರಿಗೆ ಪಾವತಿಸಲಾಗುತ್ತಿದೆ. ಆದರೆ, ರಾಜ್ಯದ ನಗರ ಪ್ರದೇಶಗಳಲ್ಲಿರುವ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೆ ಮನೆ ಬಾಗಿಲಿಗೆ ಸೀಮೆಎಣ್ಣೆ ಪೂರೈಸುವ ವ್ಯವಸ್ಥೆ ಇರುವುದಿಲ್ಲ. ಇವರು ಸಗಟು ಸೀಮೆಎಣ್ಣೆ ವಿತರಕರು ಪರವಾನಗಿ ಹೊಂದಿ ಅಂಡರ್ ಗ್ರೌಂಡ್ ಟ್ಯಾಂಕ್‌ನಲ್ಲಿ ಸೀಮೆಎಣ್ಣೆ ದಾಸ್ತಾನಿರಿಸಿರುವ ಸ್ಥಳಕ್ಕೆ ತೆರಳಿ ತಮ್ಮ ಜವಾಬ್ದಾರಿಯಲ್ಲೇ ಸೀಮೆಎಣ್ಣೆ ಎತ್ತುವಳಿ ಮಾಡಬೇಕಾಗಿದ್ದು, ಇದಕ್ಕಾಗಿ ಯಾವುದೇ ಸಾಗಾಣಿಕಾ ವೆಚ್ಚವನ್ನು ಪಾವತಿಸುತ್ತಿರುವುದಿಲ್ಲ.

ಆದರೆ, ಪಡಿತರ ಆಹಾರ ಧಾನ್ಯಕ್ಕೆ ಸಂಬಂಧಿಸಿದಂತೆ, ನಗರ ಮತ್ತು ಗ್ರಾಮಾಂತರ ಪ್ರದೇಶಗಳ ನ್ಯಾಯಬೆಲೆ ಅಂಗಡಿದಾರರು ತಾವೇ ನೇರವಾಗಿ ಸಗಟು ಮಳಿಗೆಗಳಿಂದ ಆಹಾರ ಧಾನ್ಯಗಳನ್ನು ಎತ್ತುವಳಿ ಮಾಡುತ್ತಿದ್ದು, ಇವರಿಗೆ ಸಮಾನವಾಗಿ ಸಾಗಾಣಿಕಾ ವೆಚ್ಚವನ್ನು ನೀಡಲಾಗುತ್ತಿರುತ್ತದೆ. ಅದರಂತೆ, ನಗರ ಪ್ರದೇಶಗಳಲ್ಲಿ ಚಿಲ್ಲರೆ ಸೀಮೆಎಣ್ಣೆ ವಿತರಕರು ತಾವೇ ನೇರವಾಗಿ ಸಗಟು ಸೀಮೆಎಣ್ಣೆ ನಾಮಿನಿದಾರರು ದಾಸ್ತಾನಿರಿಸಿರುವ ಸ್ಥಳದಿಂದ ಸೀಮೆಎಣ್ಣೆ ಎತ್ತುವಳಿ ಮಾಡುವುದಕ್ಕೆ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೆ ಮತ್ತು ಗ್ರಾಮಾಂತರ ಪ್ರದೇಶಗಳಂತೆ ನಗರ ಪ್ರದೇಶಗಳ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೂ ಸಗಟು ಸೀಮೆಎಣ್ಣೆ ನಾಮಿನದಾರರೇ ಮನೆ ಬಾಗಿಲಿಗೆ ಸೀಮೆಎಣ್ಣೆಯನ್ನು ಪೂರೈಸಿದಲ್ಲಿ ಸಗಟು ಸೀಮೆಎಣ್ಣೆ ನಾಮಿನಿದಾರರಿಗೆ ಪ್ರಸ್ತುತ ನೀಡಲಾಗುತ್ತಿರುವ ಗ್ರಾಮಾಂತರ ಪ್ರದೇಶಗಳ ಚಿಲ್ಲರೆ ಸಾಗಾಣಿಕಾ ವೆಚ್ಚದಂತೆ ಪ್ರತಿ ಕೆ.ಎಲ್.ಗೆ ₹.460/- ರಂತೆ ಸೀಮೆಎಣ್ಣೆ ಸಾಗಾಣಿಕಾ ವೆಚ್ಚವನ್ನು ಪಾವತಿಸಲು ಅನುಮತಿಯನ್ನು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 108 ಡಿಆರ್‌ಎ 2016, ಬೆಂಗಳೂರು, ದಿನಾಂಕ:21–05–2016.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನಗರ ಪ್ರದೇಶಗಳ ಚಿಲ್ಲರೆ ಸೀಮೆಎಣ್ಣೆ ವಿತರಕರಿಗೆ ಗ್ರಾಮಾಂತರ ಪ್ರದೇಶಗಳಂತೆ ಸೀಮೆಎಣ್ಣೆ ಸಾಗಾಣಿಕಾ ವೆಚ್ಚವನ್ನು ಪ್ರತಿ ಕೆ.ಎಲ್.ಗೆ. ₹.460/- ರಂತೆ ಸೀಮೆಎಣ್ಣೆ ಅಂತಿಮ ಒಳಕೆದಾರರಿಂದ ವಸೂಲಿ ಮಾಡಿ ಪಾವತಿಸಲು ಹಾಗೂ ರಾಜ್ಯದ ಬೊಕ್ಕಸಕ್ಕೆ ಯಾವುದೇ ರೀತಿಯ ಹೆಚ್ಚುವರಿ ಹೊರೆಯಾಗದ ಷರತ್ತಿಗೊಳಪಟ್ಟು ಪಾವತಿಸಲು ಅನುಮತಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.FD 412 Exp-5/2016, ದಿನಾಂಕ: 18.05.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**PR. 417**
**SC. 200**

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,
**ಅರ್ಚನ ಎಂ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯಹಾರಗಳ ಮತ್ತು
ಕಾನೂನು ಮಾಪನಶಾಸ್ತ್ರ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ :** 'ಸೀಮೆಎಣ್ಣೆ ಕೂಪನ್‌ನ್ನು ಕಿಯೋಸ್ಕ್ ಮೂಲಕ ಸೃಜಿಸುವುದಕ್ಕೆ ಹಾಗೂ ಅಪ್‌ಲೋಡ್ ಮಾಡಲು ಸೇವಾ ಶುಲ್ಕ ಪಾವತಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2016, (ಭಾಗ–1), ಬೆಂಗಳೂರು, ದಿನಾಂಕ:25–05–2016.**

ಸೀಮೆಎಣ್ಣೆ ಕೂಪನ್‌ನ್ನು ಕಿಯೋಸ್ಕ್ ಮೂಲಕ ಸೃಜಿಸಲು ಹಾಗೂ ಅಪ್‌ಲೋಡ್ ಮಾಡಲು ತಗಲುವ ಸೇವಾ ಶುಲ್ಕ ಕ್ರಮವಾಗಿ ₹.3 (ಮೂರು ರೂಪಾಯಿಗಳು) ಹಾಗೂ 20 (ಇಪ್ಪತ್ತು ಪೈಸೆ) ಪೈಸೆಯನ್ನು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಹಂತದಲ್ಲೇ ಪಾವತಿಸಲು ಆದೇಶಿಸಿದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8443–00–106–0–01 P.D.Account No. 02001006 (105051) ರಡಿ ಭರಿಸಲು ಅನುಮತಿಸಿದೆ.

**PR. 418**
**SC. 200**

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಮೂರ್ತಿ,**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನ ಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಡಿ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 55 ವೆಚ್ಚ–2/ 2016, ದಿನಾಂಕ:01.04.2016.
2. ಸರ್ಕಾರದ ಆದೇಶ ಸಂಖ್ಯೆ:ಸಇ 115 ರರವಿ 2016 ಬೆಂಗಳೂರು, ದಿನಾಂಕ:26.04.2016 ಮತ್ತು ಸೇರ್ಪಡೆ ಆದೇಶ ದಿನಾಂಕ : 24.05.2016.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ಸಿಎಬಿ–1/6/2016–17, ದಿನಾಂಕ : 02.05.2016 ಮತ್ತು 11.05.2016.
4. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಸಿ 2016, ದಿನಾಂಕ: 02.04.2016.

**ಪ್ರಸ್ತಾವನೆ:**

2016–17ನೇ ಸಾಲಿನಲ್ಲಿ ಸಹಕಾರ ಇಲಾಖೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಮುಂದುವರೆಸಲಾಗುವುದೆಂದು 2016–17ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ 66 ರಲ್ಲಿ ಘೋಷಿಸಲಾಗಿರುತ್ತದೆ.

ಮೇಲೆ (1)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸದರಿ ಯೋಜನೆಗೆ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ₹.88881.00 ಲಕ್ಷಗಳ ಅನುದಾನ ಹಂಚಿಕೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ಮತ್ತು ಸೇರ್ಪಡೆ ಆದೇಶದಲ್ಲಿ ಸಹಕಾರ ಇಲಾಖೆಯಲ್ಲಿ 2016–17ನೇ ಸಾಲಿನ ಮುಂದುವರೆದ ಯೋಜನೆಯಾದ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ₹. 88881.00ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2016ರಿಂದ 31.03.2017 ರವರೆಗೆ ಮುಂದುವರೆಸಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು 2014–15ನೇ ಸಾಲಿನವರೆಗೆ ಸಾಲ ನೀಡಿ 2015–16ರವರೆಗೆ ವಸೂಲಾದ ಸಾಲಗಳಿಗೆ ಸಂಬಂಧಪಟ್ಟಂತೆ ಒಟ್ಟು ₹.25388.69ಲಕ್ಷಗಳ ಬಿಲ್ಲುಗಳು ಬಿಡುಗಡೆಗೆ ಬಾಕಿ ಇದ್ದು, 2016–17ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಿರುವ ಅವಕಾಶದ ಪೈಕಿ ಮೊದಲನೇ ಕಂತಿನ ಅನುದಾನ ₹. 22,220.25ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯದ ಅವಕಾಶದ ಶೇ.50 ರಷ್ಟು ಅನುದಾನವನ್ನು ತಲಾ ಶೇ.25 ರಂತೆ 2 ಕಂತುಗಳಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 273 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:01–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿ ವ್ಯತ್ಯಾಸದ ಬಡ್ಡಿ ಸಹಾಯಧನ ₹. 22,220.25ಲಕ್ಷ (ಇಪ್ಪತ್ತೆರಡು ಸಾವಿರದ ಇನ್ನೂರ ಇಪ್ಪತ್ತು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರಗಳನ್ನು 2016–17ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒದಗಿಸಲಾಗಿರುವ ₹.88,881.00ಲಕ್ಷಗಳ ಪೈಕಿ ಮೊದಲನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

**ಯೋಜನೆ:** ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ

**ಲೆಕ್ಕಶೀರ್ಷಿಕೆ:** 2425–00–107–2–41 (₹.ಲಕ್ಷಗಳಲ್ಲಿ)

| 106–ಸಾಮಾನ್ಯ | 422–ವಿಶೇಷ ಘಟಕ ಯೋಜನೆ | 423–ಗಿರಿಜನ ಉಪ ಯೋಜನೆ | ಒಟ್ಟು |
|---|---|---|---|
| 19,450.25 | 1595.50 | 1174.50 | 22,220.25 |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಾಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ:02.04.2016ರಲ್ಲಿ ಸರ್ಕಾರದ ಇಲಾಖಾ ಕಾರ್ಯದಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 62 ಆಂಆಸ(ಎ) 2016, ದಿನಾಂಕ: 31.05.2016ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಹೊರಡಿಸಿದೆ.

PR. 419

SC-25

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಬೆಳ್ಳೂರು ಸೇವಾ ಸಹಕಾರಿ ಸಂಘ (ನಿ) ಬೆಡಗಬೆಳ್ಳೂರು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇದರ 2010–11 ರಿಂದ 2012–13 ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಗಳನ್ನು ಮರುಲೆಕ್ಕಪರಿಶೋಧನಾ ಮಾಡುವ ಕುರಿತು.

**ಓದಲಾಗಿದೆ :** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ : ತಪಘ/ಮೈವಿ/ದಕಜಿ/16/2015–16/2343, ದಿ : 12–12–2015.

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪ್ರಸ್ತಾವೆಯಲ್ಲಿ ಬೆಳ್ಳೂರು ಸೇವಾ ಸಹಕಾರಿ ಸಂಘ (ನಿ) ಬೆಡಗಬೆಳ್ಳೂರು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇದರ 2010–11 ರಿಂದ 2012–13ನೇ ಸಾಲುಗಳ ಲೆಕ್ಕಪರಿಶೋಧನೆಯಲ್ಲಿ ಬಹಳಷ್ಟು ನ್ಯೂನತೆಗಳು ಮತ್ತು ವ್ಯತ್ಯಾಸಗಳು ಅಲ್ಲದೆ ಇನ್ನಿತರ ವ್ಯತ್ಯಾಸಗಳು ಕಂಡು ಬಂದಿದ್ದು. ಇದರಿಂದ ಹಣದುರುಪಯೋಗ ಆಗಿರಬಹುದೆಂಬ ವ್ಯವಸ್ಥಾಪಕರ ಮನವಿಯ ಹಿನ್ನೆಲೆಯಲ್ಲಿ ಸದರಿ ಸಾಲುಗಳ ಲೆಕ್ಕಪರಿಶೋಧನಾ ಲೆಕ್ಕ ಪತ್ರಗಳನ್ನು ಪರಿಶೀಲಿಸಿ, ವರದಿ ಸಲ್ಲಿಸುವಂತೆ ಉಪ ನಿರ್ದೇಶಕರು, ಮಂಗಳೂರು ಇವರಿಗೆ ತಿಳಿಸಲಾಗಿದ್ದು, ದೂರು ಅರ್ಜಿಯಲ್ಲಿನ ಅಂಶಗಳನ್ನು ಸಂಘದ ಲೆಕ್ಕಪತ್ರಗಳೊಂದಿಗೆ 2010–11 ರಿಂದ 2012–13 ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಯಲ್ಲಿನ ಅಂಶಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿ ಇರುವ ಲೋಪದೋಷಗಳ, ಬಹಳಷ್ಟು ನ್ಯೂನತೆಗಳ ಹಾಗೂ ವ್ಯತ್ಯಾಸಗಳ ಬಗ್ಗೆ ದೃಢಪಡಿಸಿಕೊಂಡಿದ್ದು, ಸದರಿ ಲೆಕ್ಕಪರಿಶೋಧನಾ ವರದಿಗಳಲ್ಲಿನ ಅಂಕಿ ಅಂಶಗಳು ಸಂಘದ ನೈಜ ಆರ್ಥಿಕ ಪರಿಸ್ಥಿತಿಯನ್ನು ತಿಳಿಸದೆ ಇರುವುದನ್ನು ಮನಗಂಡು ಸದರಿ ಸಾಲುಗಳ ಸಂಘದ ಮರುಲೆಕ್ಕಪರಿಶೋಧನೆ ಅಗತ್ಯವಾಗಿದ್ದು ಸೂಕ್ತ ಹಾಗೂ ಸಮಂಜಸವಾಗಿರುತ್ತದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

ಸದರಿ ಅಭಿಪ್ರಾಯವನ್ನು ಪರಿಗಣಿಸಿ, 2010–11 ರಿಂದ 2012–13 ನೇ ಸಾಲುಗಳ ಲೆಕ್ಕಪರಿಶೋಧಿತ ಲೆಕ್ಕಪತ್ರಗಳನ್ನು **ಹಿರಿಯ ಲೆಕ್ಕಪರಿಶೋಧಕರಾದ ಶ್ರೀ ಚಂದ್ರಶೇಖರ್ ಹಿರಿಯ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಪುತ್ತೂರು ಉಪವಿಭಾಗ, ಪುತ್ತೂರು** ಇವರನ್ನು ನೇಮಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ, ಕಲಂ 63(13)ರಂತೆ ಸೂಕ್ತ ಆದೇಶ ಹೊರಡಿಸಲು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2010–11 ರಿಂದ 2012–13 ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಯಲ್ಲಿನ ಲೆಕ್ಕಗಳನ್ನು ಮರು ಲೆಕ್ಕಪರಿಶೋಧನೆ ನಡೆಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 01 ಸಿಎಲ್‌ಎಂ 2016, ಬೆಂಗಳೂರು, ದಿನಾಂಕ:03–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳ್ಳೂರು ಸೇವಾ ಸಹಕಾರಿ ಸಂಘ (ನಿ) ಬೆಡಗಬೆಳ್ಳೂರು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇದರ 2010–11 ರಿಂದ 2012–13 ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಮರು ಲೆಕ್ಕ ಪರಿಶೋಧನೆ ಮಾಡಲು **ಹಿರಿಯ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಪುತ್ತೂರು ಉಪವಿಭಾಗ, ಪುತ್ತೂರು** ಇವರನ್ನು ನೇಮಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಅನುಮತಿ ನೀಡಿ ಆದೇಶಿಸಿದೆ.

**PR. 420**
**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ರಾಧಾಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಒ 372 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ: 04–06–2016.**

ಸಹಕಾರ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ:30.03.2016 ರಲ್ಲಿ 216 ವಿವಿಧ ಸಹಕಾರ ಸಂಘಗಳಿಗೆ ಹೊಸ ಕಟ್ಟಡ/ಗೋದಾಮು ನಿರ್ಮಾಣ ಮತ್ತು ಹಳೆ ಕಟ್ಟಡಗಳ ದುರಸ್ತಿಗಾಗಿ ₹.1549 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಈ ಕೆಳಕಂಡ ಸಹಕಾರ ಸಂಘಗಳಿಗೆ ಅನುದಾನ ಬಿಡುಗಡೆ ಹಾಗೂ ಸ್ಥಳ ಬದಲಾವಣೆ ಮಾರ್ಪಡಿಸಿ ತಿದ್ದುಪಡಿ ಮಾಡಿ ಆದೇಶಿಸಿದೆ. ಅದರಂತೆ ಓದಿಕೊಳ್ಳತಕ್ಕದ್ದು. ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

| ಕ್ರ. ಸಂ. | ಜಿಲ್ಲೆಯ ಹೆಸರು | ದಿ : 30.03.2016 ರಲ್ಲಿನ ಆದೇಶದಲ್ಲಿನ ಬಿಡುಗಡೆ | | | | ತಿದ್ದುಪಡಿ ಮಾಡಿ ಹೊರಡಿಸಿದ ಆದೇಶ | | |
|---|---|---|---|---|---|---|---|---|
| | | ಕ್ರ. ಸಂ. | ಸಂಸ್ಥೆಯ ಹೆಸರು | ಉದ್ದೇಶ | ಬಿಡುಗಡೆ ಯಾದ ಮೊತ್ತ | ಸಂಸ್ಥೆಯ ಹೆಸರು | ಉದ್ದೇಶ | ಬಿಡುಗಡೆ ಯಾದ ಮೊತ್ತ |
| 1. | ಬೆಳಗಾವಿ ಜಿಲ್ಲೆ | 5 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ, ಹಾರೋಗೇರಿ ರಾಯಭಾಗ ತಾ: | ಗೋದಾಮು ನಿರ್ಮಾಣ | 7.00 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ ನಿ., ಕೋಳಿಗುಡ್ಡ, ಕುಡಚಿ ಮತಕ್ಷೇತ್ರ | ಗೋದಾಮು ನಿರ್ಮಾಣ | 7.00 |

| ಕ್ರ. ಸಂ. | ಜಿಲ್ಲೆಯ ಹೆಸರು | ದಿ : 30.03.2016 ರಲ್ಲಿನ ಆದೇಶದಲ್ಲಿನ ಬಿಡುಗಡೆ | | | | ತಿದ್ದುಪಡಿ ಮಾಡಿ ಹೊರಡಿಸಿದ ಆದೇಶ | | |
|---|---|---|---|---|---|---|---|---|
| | | ಕ್ರ. ಸಂ. | ಸಂಸ್ಥೆಯ ಹೆಸರು | ಉದ್ದೇಶ | ಬಿಡುಗಡೆ ಯಾದ ಮೊತ್ತ | ಸಂಸ್ಥೆಯ ಹೆಸರು | ಉದ್ದೇಶ | ಬಿಡುಗಡೆ ಯಾದ ಮೊತ್ತ |
| | | 6 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ, ಮುತನಾಳ ಕುಕ್ಕೇರಿ ತಾ॥ ಬೆಳಗಾವಿ | ಗೋದಾಮು ನಿರ್ಮಾಣ | 9.00 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ ಇಂಚಲ್, ಸವದತ್ತಿ ತಾ॥ | ಗೋದಾಮು ನಿರ್ಮಾಣ | 4.00 |
| | | 15 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ, ಇಂಚಲ್, ಸವದತ್ತಿ ತಾ॥ ಇದರ | ಗೋದಾಮು ನಿರ್ಮಾಣ | 7.00 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ ನಿ., ಹುದಲಿ, ಬೆಳಗಾವಿ ತಾ: | ಗೋದಾಮು ನಿರ್ಮಾಣ | 12.00 |
| | | 17 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ, ಮಂಗಾವತಿ, ಚಿಕ್ಕೋಡಿ ತಾ: | ಕಟ್ಟಡ ನಿರ್ಮಾಣ | 6.00 | ಪ್ರಾ.ಕೃಷಿ ಪತ್ತಿನ ಸಹಕಾರ ಸಂಘ, ಮಂಗಾವತಿ, ಅಥಣಿ ತಾ: | ಕಟ್ಟಡ ನಿರ್ಮಾಣ | 6.00 |
| **2** | ತುಮಕೂರು | 1. | ಶೀರಾ ತಾಲ್ಲೂಕಿನ ಟಿ.ಎ.ಪಿ.ಸಿ.ಎಂ.ಎಸ್ | ಕಟ್ಟಡ ನಿರ್ಮಾಣ/ ನವೀಕರಣ | 12.00 | ಪಿ.ಎಲ್.ಡಿ. ಬ್ಯಾಂಕ್ ಶಿರಾ ತಾ: | ಕಟ್ಟಡ ನಿರ್ಮಾಣ | 12.00 |
| | | 2. | ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕಸಬಾ ಹೋಬಳಿ ತುಮಕೂರು | ಕಟ್ಟಡ ನಿರ್ಮಾಣ | 8.00 | ವ್ಯ.ಸೇ.ಸಹಕಾರ ಸಂಘ ನಿ., ಸಿದ್ಧಾರ್ಥನಗರ. ಕಸಬಾ ಹೋಬಳಿ, ತುಮಕೂರು ತಾ: | ಕಟ್ಟಡ ನಿರ್ಮಾಣ | 8.00 |
| **3** | ಗದಗ | 9 | ಪ್ರಾ.ಕೃ.ಪ.ಸ.ಸಂಘ, ಅಡರಕಟ್ಟಿ, ಗದಗ ತಾಲ್ಲೂಕು | ಕಟ್ಟಡ ನಿರ್ಮಾಣ | 6.00 | ಪ್ರಾ.ಕೃ.ಪ.ಸ.ಸಂಘ ನಿ., ಅಡರಕಟ್ಟಿ, ಶಿರಹಟ್ಟಿ ತಾ. | ಕಟ್ಟಡ ನಿರ್ಮಾಣ | 6.00 |
| **4** | ಬಳ್ಳಾರಿ | 3 | ವ್ಯ.ಸೇ.ಸಹಕಾರ ಸಂಘ, ರೂಪನವಾಡಿ, ಬಳ್ಳಾರಿ ಜಿಲ್ಲೆ. | ಕಟ್ಟಡ ನಿರ್ಮಾಣ | 8.00 | ವ್ಯ.ಸೇ.ಸಹಕಾರ ಸಂ ನಿ., ರೂಪನಗುಡಿ, ಬಳ್ಳಾರಿ ಜಿಲ್ಲೆ | ಕಟ್ಟಡ ನಿರ್ಮಾಣ | 8.00 |
| **5** | ಮಂಡ್ಯ | 3 | ಪ್ರಾ.ಕೃಷಿ ಪತ್ತಿನ ಸ.ಸಂಘ ನಿ., ಸೋಮನಹಳ್ಳಿ ಮದ್ದೂರು ತಾ: | ಕಟ್ಟಡ ನಿರ್ಮಾಣ | 10.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಆಲೂರು ಮದ್ದೂರು ತಾ. | ಕಟ್ಟಡ ನಿರ್ಮಾಣ | 10.00 |
| **6** | ಚಿತ್ರದುರ್ಗ | 3 | ಪ್ರಾ.ಕೃಷಿ ಪತ್ತಿನ ಸ.ಸಂಘ ನಿ., ದೊಡ್ಡ ಉಳ್ಳಾರ್ತಿ, ಚಳ್ಳಕೆರೆ ತಾ: | ಕಟ್ಟಡ ನಿರ್ಮಾಣ/ ದುರಸ್ತಿ | 9.00 | ಚಿತ್ರದುರ್ಗ ತಾಲ್ಲೂಕಿನ ಕಡಬನಕಟ್ಟೆ ಗ್ರಾಮದ ಸಹಕಾರ ಸಂಘ | ಕಟ್ಟಡ ನಿರ್ಮಾಣ/ ದುರಸ್ತಿ | 9.00 |

**PR. 421**

**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ನಬಾರ್ಡ್ ಸಾಲದಡಿ ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ಸ್ಥಾಪಿಸಲು 639–00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಸಹಕಾರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ 65 ರಾಉನಿ 2014, ದಿನಾಂಕ: 14.01.2016.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿ 64 ಎಲ್‌ಜಿಎಲ್ 2015, ದಿನಾಂಕ: 25.02.2016.
3. ಸಹಕಾರ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಸಇ 65 ರಾಉನಿ 2014, (ಭಾಗ) ದಿನಾಂಕ: 30.04.2016.
4. ಸಹಕಾರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸ ಇ 65 ರಾಉನಿ 2014, (ಭಾಗ) ದಿನಾಂಕ: 16.05.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಅನಧಿಕೃತ ಟಿಪ್ಪಣಿಯಲ್ಲಿ ಕೃಷಿ ಇಲಾಖೆ, ಕೃಷಿ ವಿಶ್ವವಿದ್ಯಾಲಯ, ತೋಟಗಾರಿಕೆ ಇಲಾಖೆ ಮತ್ತು ರೇಷ್ಮೆ ಇಲಾಖೆಗಳಿಗೆ ಸೇರಿದ ಒಟ್ಟು 639 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ನಬಾರ್ಡ್ ಸಾಲದಡಿ ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಮುಫತ್ತಾಗಿ ಲೀಸ್ ಆಧಾರದ ಮೇಲೆ ಸಹಕಾರ ಇಲಾಖೆಗೆ ಹಸ್ತಾಂತರಿಸುವಂತೆ ಕೋರಲಾಗಿತ್ತು.

ಸಹಕಾರ ಇಲಾಖೆಯು ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ (2)ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಮುಫತ್ತಾಗಿ ಹಸ್ತಾಂತರಿಸುವ ಬಗ್ಗೆ ದಿನಾಂಕ:21.01.2015ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಅನುಮೋದನೆ ಪಡೆದಿರುವುದಾಗಿ ಸಹಕಾರ ಇಲಾಖೆ ತಿಳಿಸಿತ್ತು. ಆದರೆ ಸ್ಪಷ್ಟ ಮಾಹಿತಿ ಇರಲಿಲ್ಲವಾದ್ದರಿಂದ ಮೇಲೆ ತಿಳಿಸಿದ ವಿವಿಧ ಇಲಾಖೆಗಳ ಒಟ್ಟು 639 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಹಸ್ತಾಂತರಿಸಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ, 1969ರನ್ವಯ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆಯ ಶೇ.10ರಷ್ಟು ವಾರ್ಷಿಕ ಗುತ್ತಿಗೆ ಮೊತ್ತ ಹಾಗೂ ಸದರಿ ಗುತ್ತಿಗೆ ಮೊತ್ತದ ಶೇ.5ರಷ್ಟನ್ನು ಪ್ರತಿ ಎರಡು ವರ್ಷಕ್ಕೊಮ್ಮೆ ಹೆಚ್ಚಿಸಿ ಪರಿಷ್ಕರಿಸಿ ವಿಧಿಸಬೇಕಾಗುತ್ತದೆ ಎಂದೂ, ಒಂದು ವೇಳೆ ಯಾವುದೇ ಶುಲ್ಕವನ್ನು ವಿಧಿಸದೆ ಮುಫತ್ತಾಗಿ ನೀಡುವುದಾದಲ್ಲಿ ಅದಕ್ಕೆ ನಿರ್ದಿಷ್ಟವಾಗಿ ಸಹಕಾರ ಇಲಾಖೆಯು ಸಚಿವ ಸಂಪುಟದ ಅನುಮೋದನೆಯನ್ನು ಪುನಃ ಪಡೆಯಬೇಕೆಂದು ಕಂದಾಯ ಇಲಾಖೆಯ ಸಹಮತಿ ತಿಳಿಸಲಾಗಿತ್ತು.

ಸಹಕಾರ ಇಲಾಖೆಯು ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ನಬಾರ್ಡ್ ಸಂಸ್ಥೆಯಿಂದ ₹.650.00 ಕೋಟಿಗಳ ಸಾಲ ಪಡೆದು ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ನಿರ್ಮಿಸಲು ಮೇಲೆ ಹೇಳಲಾದ ವಿವಿಧ ಇಲಾಖೆಗಳ ಒಟ್ಟು 639–00 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಮುಫತ್ತಾಗಿ (Free lease land) ಲೀಸ್ ಆಧಾರದ ಮೇಲೆ ಪಡೆಯಲು ದಿನಾಂಕ:20.04.2016ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಅನುಮೋದನೆ ಪಡೆದು ಆದೇಶ ಹೊರಡಿಸಿರುತ್ತದೆ.

ಮೇಲೆ ಓದಲಾದ (4)ರ ಅನಧಿಕೃತ ಟಿಪ್ಪಣಿಯಲ್ಲಿ ಸಹಕಾರ ಇಲಾಖೆಯು ಸದರಿ 639 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಹಸ್ತಾಂತರಿಸುವ ಪ್ರಸ್ತಾವನೆಗೆ ದಿನಾಂಕ:20.04.2016ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಮರುಮಂಡಿಸಿ ಅನುಮೋದನೆ ಪಡೆದು ಆದೇಶ ಹೊರಡಿಸಲಾಗಿದ್ದು, ಅದರಂತೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕಂದಾಯ ಇಲಾಖೆಯನ್ನು ಕೋರಿದೆ.

ಈಗಾಗಲೇ ಕಂದಾಯ ಇಲಾಖೆಯು ನೀಡಿರುವ ಸಹಮತಿಯನ್ವಯ ಸಹಕಾರ ಇಲಾಖೆಯು ಕ್ರಮವಹಿಸಿ ಆದೇಶ ಹೊರಡಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಲ್‌ಜಿಎಲ್ 2015, ಬೆಂಗಳೂರು, ದಿನಾಂಕ:25–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಕಾರ ಇಲಾಖೆಯು ನಬಾರ್ಡ್ ಸಾಲದಡಿ ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ನಿರ್ಮಿಸುವ ಉದ್ದೇಶಕ್ಕಾಗಿ ಕೃಷಿ ಇಲಾಖೆಯ 457.00 ಎಕರೆ, ಕೃಷಿ ವಿಶ್ವವಿದ್ಯಾಲಯದ 25.00 ಎಕರೆ, ತೋಟಗಾರಿಕೆ ಇಲಾಖೆಯ 38.00 ಎಕರೆ ಹಾಗೂ ರೇಷ್ಮೆ ಇಲಾಖೆಯ 119.00 ಎಕರೆ ಹೀಗೆ ಒಟ್ಟು 639.00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 30 ವರ್ಷಗಳ ಅವಧಿಗೆ ಮುಫತ್ತಾಗಿ (Free lease land) ಲೀಸ್ ಆಧಾರದ ಮೇಲೆ ಹಸ್ತಾಂತರಿಸಿ ಆದೇಶಿಸಿದೆ.

**PR. 422**

**SC-25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎಲ್.ಮಹಾಂತೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.(ಭೂ ಮಂಜೂರಾತಿ–1)

## ಕಂದಾಯ ಸಚಿವಾಲಯ

**ವಿಷಯ :** ಮಳವಳ್ಳಿ ಟೌನ್ ಕುಂಬಾರರ ಸಂಘ(ರಿ) ಮಳವಳ್ಳಿ ಇವರಿಗೆ ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಮಳವಳ್ಳಿ ಗ್ರಾಮದ ಸ.ನಂ. 653 ರಲ್ಲಿ 2–00 ಎಕರೆ ಜಮೀನು ಮಂಜೂರು ಮಾಡಿರುವುದನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪತ್ರ ಸಂಖ್ಯೆ: 900/1987–88 ಮತ್ತು 187/2006–07, ದಿನಾಂಕ: 11.03.2016.

**ಪ್ರಸ್ತಾವನೆ :–**

ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಮೇಲೆ ಓದಲಾದ ಪತ್ರದಲ್ಲಿ ಮಂಡ್ಯ ಜಿಲ್ಲೆ ಮಳ್ಳವಳ್ಳಿ ತಾಲ್ಲೂಕು, ಮಳ್ಳವಳ್ಳಿ ಗ್ರಾಮದ ಸ.ನಂ.653 ರಲ್ಲಿ 2–00 ಎಕರೆ ಜಮೀನನ್ನು ಮಳವಳ್ಳಿ ಟೌನ್ ಕುಂಬಾರರ ಸಂಘ(ರಿ) ಮಳವಳ್ಳಿ ಇವರಿಗೆ ಮಡಿಕೆ ಮಾಡಲು ಮಣ್ಣು ತೆಗೆಯುವ ಉದ್ದೇಶಕ್ಕೆ ಮಾತ್ರ

ಮಂಜೂರು ಮಾಡಲು ಸರ್ಕಾರದ ಪತ್ರ ಸಂಖ್ಯೆ ಆರ್‌ಡಿ 9 ಎಲ್‌ಜಿವೈ 2005, ದಿನಾಂಕ:19.05.2005 ರಂತೆ ಸರ್ಕಾರದ ಪೂರ್ವಾನುಮೋದನೆಯನ್ನು ನೀಡಲಾಗಿತ್ತು ಅದರಂತೆ, ಜಿಲ್ಲಾಧಿಕಾರಿಯವರ ದಿನಾಂಕ:15–11–2007ರ ಅಧಿಕೃತ ಜ್ಞಾಪನ ರನ್ವಯ ಸದರಿ ಜಮೀನನ್ನು ಮಂಜೂರು ಮಾಡಿದ ಉದ್ದೇಶಕ್ಕಾಗಿ 2 ವರ್ಷದೊಳಗೆ ಬಳಸಿಕೊಳ್ಳತಕ್ಕದ್ದೆಂದು ಷರತ್ತನ್ನು ವಿಧಿಸಿ ಹಾಗೂ ಉಪಯೋಗಿಸದೇ ಇದ್ದ ಪಕ್ಷದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು ಎಂಬ ಷರತ್ತು ವಿಧಿಸಿ ಮಂಜೂರಾತಿ ನೀಡಲಾಗಿತ್ತು.

ಸದರಿ ಸಂಘವು ಮಂಜೂರಾದ 2 ವರ್ಷದೊಳಗೆ ಯಾವ ಉದ್ದೇಶಕ್ಕೆ ಮಂಜೂರಾಗಿತ್ತೋ ಆ ಉದ್ದೇಶಕ್ಕೆ ಬಳಸದೇ ಇರುವುದರಿಂದ ಹಾಗೂ ಜಮೀನಿನ ಮೌಲ್ಯವನ್ನು ಸಕಾಲದಲ್ಲಿ ಸರ್ಕಾರಕ್ಕೆ ಪಾವತಿಸದೇ ಇರುವುದರಿಂದ ಸದರಿ ಜಮೀನನ್ನು ಸಾರ್ವಜನಿಕರಿಗೆ ಉಪಯೋಗವಾಗುವಂತೆ ನ್ಯಾಯಾಂಗ ಇಲಾಖೆ ಮಳವಳ್ಳಿಯವರಿಗೆ ಪ್ರಥಮ ದರ್ಜೆ ಮುನ್ಸಿಪ್ ನ್ಯಾಯಾಲಯದ ಸಂಕೀರ್ಣ ಕಟ್ಟಡ ನಿರ್ಮಾಣದ ಉದ್ದೇಶಕ್ಕೆ ವರ್ಗಾಯಿಸಲು ಜಿಲ್ಲಾಧಿಕಾರಿ ಅಧಿಕೃತ ಜ್ಞಾಪನ ಸಂಖ್ಯೆ: ಎಲ್‌ಎನ್‌ಡಿ:ಸಿಆರ್:346/2013–14, ದಿನಾಂಕ:07–02–2014 ರಂತೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಖಾತೆ ಅಂಗೀಕಾರವಾಗಿ ಆರ್‌ಟಿಸಿಯಲ್ಲಿ ದಾಖಾಲಾಗಿರುವುದಾಗಿ ವರದಿ ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳ ದಿನಾಂಕ: 07–02–2014ರ ಆದೇಶದ ವಿರುದ್ಧ ಅಧ್ಯಕ್ಷರು, ಮಳವಳ್ಳಿ ಟೌನ್ ಕುಂಬಾರರ ಸಂಘ(ರಿ) ಮಳವಳ್ಳಿ ಇವರು ಕರ್ನಾಟಕ ಉಚ್ಚ ನ್ಯಾಯಾಲದಲ್ಲಿ ರಿಟ್ ಸಂಖ್ಯೆ 13771/2014 (ಕೆ.ಎಲ್.ಆರ್–ಆರ್.ಇ.ಎಸ್) ದಾಖಲಿಸಿದ್ದು, ಸದರಿ ರಿಟ್ ಅರ್ಜಿಯು ದಿನಾಂಕ:1–10–2015ರಂದು ಆದೇಶವಾಗಿದ್ದು, ರಾಜ್ಯ ಸರ್ಕಾರವು ಸಂಘಕ್ಕೆ ಮಂಜೂರು ಮಾಡಿದ ಜಮೀನನ್ನು ರದ್ದುಪಡಿಸಲು ಉದ್ದೇಶಿಸಿದಲ್ಲಿ, ನಿಯಮಾನುಸಾರ ಕ್ರಮ ತೆಗೆದುಕೊಳ್ಳವಂತೆ ಆದೇಶಿಸಿರುತ್ತದೆ.

ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ, ಅಧ್ಯಕ್ಷರು, ಮಳವಳ್ಳಿ ಟೌನ್ ಕುಂಬಾರರ ಸಂಘ(ರಿ) ಮಳವಳ್ಳಿ ಇವರಿಗೆ ಕಾರಣ ಕೇಳುವ ನೋಟೀಸ್ ಸಂಖ್ಯೆ: ಎಲ್‌ಎನ್‌ಡಿ(1)ಸಿಆರ್: 900/87–88, ಎಲ್‌ಎನ್‌ಡಿ(1)ಸಿಆರ್:187/06–07, ದಿನಾಂಕ: 05–12–2015 ರಲ್ಲಿ ಮಂಜೂರಾದ ಉದ್ದೇಶಕ್ಕೆ ಮಂಜೂರಾದ ಜಮೀನನ್ನು ಎರಡು ವರ್ಷಗಳೊಳಗೆ ಉಪಯೋಗಿಸಿಕೊಳ್ಳದೇ ಇರುವುದರಿಂದ ಮಂಜೂರಾತಿ ಆದೇಶದಲ್ಲಿನ ಷರತ್ತುಗಳನ್ನು ಉಲ್ಲಂಘಿಸಿರುವುದರಿಂದ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ನಿಯಮ 25 ರನ್ವಯ ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ದಿನಾಂಕ: 05–12–2015 ರಂದು ನೋಟೀಸ್ ನೀಡಲಾಗಿತ್ತು. ಸಂಘವು ಅವರ ವಕೀಲರ ಮೂಲಕ ದಿನಾಂಕ: 17–12–2015 ರಂದು ಸಮಜಾಯಿಷಿ ನೀಡಿದ್ದು, ನೀಡಿರುವ ಸಮಜಾಯಿಷಿ ಸಮಂಜಸವಾಗಿರುವುದಿಲ್ಲ ಹಾಗೂ ಸಕಾರಣದಿಂದ ಕೂಡಿರುವುದಿಲ್ಲದೆ ಇರುವುದರಿಂದ ಒಪ್ಪಲು ಅವಕಾಶವಿರುವುದಿಲ್ಲ ಎಂದು ಜಿಲ್ಲಾಧಿಕಾರಿಯವರು ಮೇಲೆ ಓದಲಾದ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಮುಂದುವರೆದು, ಕುಂಬಾರ ಸಂಘದವರು ಮಂಜೂರಾತಿ ಷರತ್ತಿನಂತೆ 2 ವರ್ಷದೊಳಗೆ ಮಡಿಕೆ ಮಾಡಲು ಮತ್ತು ಮಣ್ಣು ತೆಗೆಯಲು ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಕೃಷಿಯೇತರ ಉದ್ದೇಶಕ್ಕಾಗಿ ಭೂ ಪರಿವರ್ತನೆ ಮಂಜೂರು ಮಾಡಿಸಿಕೊಂಡು ದಿನಾಂಕ:19–05–2005 ರನ್ವಯ ಉಪಯೋಗಿಸಿಕೊಳ್ಳಬೇಕಾಗಿತ್ತು ಮತ್ತು ಮಂಜೂರಾಗಿ 7 ವರ್ಷಗಳಾದರೂ ಸಹ ಕೃಷಿಯೇತರ ಉದ್ದೇಶಕ್ಕಾಗಿ ಭೂ ಪರಿವರ್ತನೆ ಮಂಜೂರಾತಿ ಪಡೆದುಕೊಂಡಿರುವುದಿಲ್ಲ.

ಹಿರಿಯ ಭೂ ವಿಜ್ಞಾನಿ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಮಂಡ್ಯ ಇವರ ದಿನಾಂಕ: 26–12–2015ರ ಪತ್ರದಲ್ಲಿ ಸಂಘಕ್ಕೆ ಮಂಜೂರಾದ 2–00 ಎಕರೆ ಜಮೀನು ಕುರಿತು clay ಮಣ್ಣಿನ ಲಭ್ಯತೆ ಬಗ್ಗೆ ಸ್ಥಳ ಪರಿಶೀಲನೆ ನಡೆಸಲಾಗಿ, ಸದರಿ ಪ್ರದೇಶವು ಲಭುವಿರುವ ಮಣ್ಣು clay ಮುಕ್ತವಾಗಿದ್ದು (devoid of clayey particles) ಗಾತ್ರದಲ್ಲಿ Medium to coarse grained ಆಗಿರುವುದಾಗಿ ಅದರಿಂದ ಲಭ್ಯವಿರುವ ಮಣ್ಣು ಮಡಿಕೆ ಉದ್ಯಮಕ್ಕೆ ಉಪಯೋಗಿಸಲು ಯೋಗ್ಯವಾಗಿರುವುದಿಲ್ಲ ಹಾಗೂ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994 ನಿಯಮ 6(2) ರಂತೆ ಸದರಿ ಪ್ರದೇಶದಲ್ಲಿ clay ಮಣ್ಣಿನ ಗಣಿಗಾರಿಕೆಗೆ ಅವಕಾಶವಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಯವರು ಮಳವಳ್ಳಿ ಟೌನ್ ಕುಂಬಾರರ ಸಂಘ(ರಿ) ಮಳವಳ್ಳಿ ಇವರು ಮಂಜೂರಾಗಿರುವ ಜಮೀನನ್ನು ಮಂಜೂರಾತಿ ಷರತ್ತಿನಂತೆ 2 ವರ್ಷದೊಳಗೆ ಮಂಜೂರಾದ ಉದ್ದೇಶಕ್ಕೆ ಬಳಸಿಕೊಂಡಿರುವುದಿಲ್ಲ ಹಾಗೂ ಮಂಜೂರಿದಾರರು ಕೃಷಿಯೇತರ ಉದ್ದೇಶಕ್ಕಾಗಿ 2 ವರ್ಷದೊಳಗೆ ಭೂ ಪರಿವರ್ತನೆ ಮಂಜೂರು ಮಾಡಿಸಿಕೊಂಡಿರುವುದಿಲ್ಲ ಹಾಗೂ ಮಂಜೂರಾತಿ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 25ರನ್ವಯ ಮಂಜೂರಾತಿಯನ್ನು ರದ್ದು ಪಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ ರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 27 ಎಲ್‌ಜಿವೈ 2015, ದಿನಾಂಕ:21–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಡ್ಯ ಜಿಲ್ಲೆ, ಮಳ್ಳವಳ್ಳಿ ತಾಲ್ಲೂಕು, ಮಳ್ಳವಳ್ಳಿ ಗ್ರಾಮದ ಸ.ನಂ.653 ರಲ್ಲಿ 2–00ಎಕರೆ ಜಮೀನನ್ನು ಮಳವಳ್ಳಿ ಟೌನ್, ಕುಂಬಾರರ ಸಂಘಕ್ಕೆ ಮಡಿಕೆ ಮಾಡಲು ಮಣ್ಣು ತೆಗೆಯುವ ಉದ್ದೇಶಕ್ಕೆ ಮಾತ್ರ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮತಿ ನೀಡಿದ ಪತ್ರ ಸಂಖ್ಯೆ:ಆರ್‌ಡಿ 9 ಎಲ್‌ಜಿವೈ 2005, ದಿನಾಂಕ: 19–05–2005ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಮುಂದುವರೆದು, ಸದರಿ 2–00 ಎಕರೆ ಜಮೀನನ್ನು ಮಳವಳ್ಳಿಯ ಪ್ರಥಮ ದರ್ಜೆ ಮುನ್ಸಿಪ್ ನ್ಯಾಯಾಲಯದ ಸಂಕೀರ್ಣ ಕಟ್ಟಡ ನಿರ್ಮಾಣದ ಉದ್ದೇಶಕ್ಕೆ ನ್ಯಾಯಾಂಗ ಇಲಾಖೆ, ಮಳವಳ್ಳಿ ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

**PR. 423**

**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್,**
ಪೀಠಾಧಿಕಾರಿ,
ಕಂದಾಯ ಇಲಾಖೆ.(ಭೂ ಮಂಜೂರಾತಿ–2)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಪಂಚಾಯತ್ ಯೋಜನಾ ಘಟಕದಲ್ಲಿರುವ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು 2016–17ನೇ ಸಾಲಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಯೋಇ 07 ಪಿಟಿಪಿ 2015, ದಿನಾಂಕ:14.08.2015.

2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ದಾವಣಗೆರೆ, ರಾಮನಗರ, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆ ಇವರಿಂದ ಬಂದಿರುವ ಪ್ರಸ್ತಾವನೆ.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರ.ಸಂ (1)ರ ಸರ್ಕಾರದ ಆದೇಶದಲ್ಲಿ ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ ಒಟ್ಟು 397 ಯೋಜನೇತರ ವಿವಿಧ ಹುದ್ದೆಗಳನ್ನು 2015–16ನೇ ಸಾಲಿಗೆ ಅಂದರೆ ದಿನಾಂಕ: 01/04/2015 ರಿಂದ 31/03/2016 ರವರೆಗೆ ಮುಂದುವರೆಸಲಾಗಿತ್ತು. ರಾಜ್ಯದ 30 ಜಿಲ್ಲೆಗಳ ಮುಖ್ಯ ಯೋಜನಾಧಿಕಾರಿಗಳನ್ನು ಹಾಗೂ ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧಿಕಾರಿ ಇನ್ನಿತರ ಪೂರಕ ಸಿಬ್ಬಂದಿ ವರ್ಗದವರನ್ನು ಇದರ ಜೊತೆಗೆ 107 ತಾಲ್ಲೂಕು ಯೋಜನಾ ಘಟಕಗಳಲ್ಲಿನ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದೆ.

| | | | |
|---|---|---|---|
| 1. | ಮುಖ್ಯ ಯೋಜನಾಧಿಕಾರಿಗಳು. | – | 30 |
| 2. | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧಿಕಾರಿಗಳು | – | 30 |
| 3. | ತಾಲ್ಲೂಕು ಯೋಜನಾಧಿಕಾರಿಗಳು | – | 107 |
| 4. | ಯೋಜನಾ ಸಹಾಯಕರು (ಆರ್ಥಿಕ) | – | 27 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | – | 25 |
| 6. | ಪ್ರಥಮ ದರ್ಜೆ ಸಹಾಯಕರು | – | 28 |
| 7. | ದ್ವಿತೀಯ ದರ್ಜೆ ಸಹಾಯಕರು | – | 37 |
| 8. | ಶೀಘ್ರಲಿಪಿಗಾರರು | – | 29 |
| 9. | ಬೆರಳಚ್ಚುಗಾರರು | – | 32 |
| 10. | ದಲಾಯತ್ | – | 52 |
| | **ಒಟ್ಟು** | – | **397** |

ಮೇಲ್ಕಂಡ ಎಲ್ಲಾ ಹುದ್ದೆಗಳು ಯೋಜನಾ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಗೆ ಒಳಪಟ್ಟಿರುತ್ತವೆ ಹಾಗೂ ಈ ಹುದ್ದೆಗಳನ್ನು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಂಪೂರ್ಣ ಆಡಳಿತ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಮೇಲೆ ಓದಲಾದ ಕ್ರ.ಸಂ. (2)ರ ಪತ್ರಗಳಲ್ಲಿ ನಮೂದಿಸಿರುವ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಆಧಿಕಾರಿಗಳು, ಯೋಜನಾ ಘಟಕಗಳ ಯೋಜನೇತರ ಹುದ್ದೆಗಳನ್ನು ದಿನಾಂಕ:01.04.2016ರಿಂದ 31.3.2017ರವರೆಗೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಿ, ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

ರಾಜ್ಯದ ಎಲ್ಲಾ 30 ಜಿಲ್ಲೆಗಳ ಯೋಜನಾ ಘಟಕಗಳಿಗೆ ಮಂಜೂರಾದ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಬೇಕಾಗಿರುವ ಅಗತ್ಯತೆಯನ್ನು ಮನಗಂಡು 2016–17ನೇ ಸಾಲಿಗೆ ಅಂದರೆ ದಿನಾಂಕ: 1–4–2016 ರಿಂದ 31.3–2017 ರವರೆಗೆ ಒಂದು ವರ್ಷದ ಅವಧಿಗೆ ಆಡಳಿತ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 04 ಸಸಪ್ರ 2016, ಬೆಂಗಳೂರು, ದಿನಾಂಕ:10–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದ ಅನುಬಂಧದಲ್ಲಿ ತೋರಿಸಿರುವ ರಾಜ್ಯದ 30 ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ ಈ ಕೆಳಕಂಡ 397 ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು.

2016–17ನೇ ಸಾಲಿಗೆ, ಅಂದರೆ ದಿನಾಂಕ: 01/04/2016 ರಿಂದ 31/03/2017ರವರಗೆ ಒಂದು ವರ್ಷದ ಅವಧಿಗೆ ಆಡಳಿತ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | | |
|---|---|---|---|
| 1. | ಮುಖ್ಯ ಯೋಜನಾಧಿಕಾರಿಗಳು. | – | 30 |
| 2. | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧಿಕಾರಿ | – | 30 |
| 3. | ತಾಲ್ಲೂಕು ಯೋಜನಾಧಿಕಾರಿಗಳು | – | 107 |
| 4. | ಯೋಜನಾ ಸಹಾಯಕರು (ಆರ್ಥಿಕ) | – | 27 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | – | 25 |
| 6. | ಪ್ರಥಮ ದರ್ಜೆ ಸಹಾಯಕರು | – | 28 |
| 7. | ದ್ವಿತೀಯ ದರ್ಜೆ ಸಹಾಯಕರು | – | 37 |
| 8. | ಶೀಘ್ರಲಿಪಿಗಾರರು | – | 29 |
| 9. | ಬೆರಳಚ್ಚುಗಾರರು | – | 32 |
| 10. | ದಲಾಯತ್ | – | 52 |
| | **ಒಟ್ಟು** | – | **397** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಪ್ರಸ್ತುತ ಸಾಲಿನ ಲೆಕ್ಕ ಶೀರ್ಷಿಕೆ 3451–00–101–0–26 ಜಿಲ್ಲಾ ಪಂಚಾಯತ್ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

**PR. 424**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ತಿಪ್ಪೇಸ್ವಾಮಿ,**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ :** ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ಬಲವರ್ಧಿತ ತಾಳೆ ಎಣ್ಣೆ ವಿತರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆನಾಸ 204 ಡಿಆರ್‌ಎ 2015, ದಿನಾಂಕ : 07–04–2015.
2. ಕೇಂದ್ರ ಸರ್ಕಾರದ ದಿನಾಂಕ : 19–02–2016 ರಂದು ಪಿಡಿಎಸ್ ವಸ್ತುಗಳ ಬಲವರ್ಧನೆಯ ಬಗ್ಗೆ ನಡೆದ ಸಭೆಯ ಸಭಾ ನಡವಳಿ.
3. ದಿನಾಂಕ : 13–06–2016 ರಂದು ನಡೆದ ಕಾರ್ಯದರ್ಶಿಗಳು, ಅನಾಸ ಮತ್ತು ಗ್ರಾವ್ಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಲ್ಲಿ ಫೋರ್ಟಿಫೈಡ್ ತಾಳೆಎಣ್ಣೆ ವಿತರಣೆ ಬಗ್ಗೆ ನಡೆದ ಸಭೆಯ ಸಭಾ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಂತೆ ಮೇ 2015ರ ಮಾಹೆಯಿಂದ ರಾಜ್ಯದ ಪಡಿತರ ವಿತರಣಾ ವ್ಯವಸ್ಥೆಯಡಿ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ಪ್ರತಿ ಮಾಹೆ ರಿಯಾಯಿತಿ ದರದಲ್ಲಿ ಅಂದರೆ ರೂ. 25/–ರಂತೆ ಒಂದು ಲೀಟರ್ ತಾಳೆ ಎಣ್ಣೆಯನ್ನು ವಿತರಿಸಲಾಗುತ್ತಿದೆ.

ಮೇಲೆ ಓದಲಾದ (2)ರ ಕೇಂದ್ರ ಸರ್ಕಾರದ ಸಭಾ ನಡವಳಿಯಲ್ಲಿ ದೇಶದಲ್ಲಿ ಅಪೌಷ್ಟಿಕತೆ ಮತ್ತು ರಕ್ತಹೀನತೆಯ ಸಮಸ್ಯೆಯನ್ನು ನಿವಾರಿಸಲು ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ವಿತರಿಸಲಾಗುವ ಪಡಿತರ ವಸ್ತುಗಳನ್ನು ಕಿರು ಪೌಷ್ಟಿಕಾಂಶಗಳನ್ನು ಸೇರಿಸುವ ಮೂಲಕ ಬಲವರ್ಧಿಸಿ ವಿತರಿಸಲು ರಾಜ್ಯಗಳಿಗೆ ನಿರ್ದೇಶನ ನೀಡಲಾಗಿರುತ್ತದೆ.

ಮೇಲೆ ಓದಲಾದ (3)ರ ಸಭಾ ನಡವಳಿಯಲ್ಲಿ ರಾಜ್ಯದ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ವಿಟಮಿನ್ 'ಎ' ಮತ್ತು 'ಡಿ' ಯನ್ನು ಒಳಗೊಂಡ ಬಲವರ್ಧಿತ ತಾಳೆಎಣ್ಣೆಯನ್ನು ಸೆಪ್ಟಂಬರ್ 2016 ರಿಂದ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ವಿತರಿಸಲು ತೀರ್ಮಾನಿಸಲಾಗಿರುತ್ತದೆ.

ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 136 ಡಿಆರ್‌ಎ 2016, ಬೆಂಗಳೂರು, ದಿನಾಂಕ : 14ನೇ ಜುಲೈ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸೆಪ್ಟಂಬರ್ 2016ರ ಮಾಹೆಯಿಂದ ಜಾರಿಗೆ ಬರುವಂತೆ ರಾಜ್ಯದ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ಪ್ರತಿ ಮಾಹೆ ಪ್ರತಿ ಪಡಿತರ ಚೀಟಿಗೆ ರಿಯಾಯಿತಿ ದರದಲ್ಲಿ (ಪ್ರತಿ ಲೀಟರ್‌ಗೆ ರೂ. 25/– ರಂತೆ) ವಿಟಮಿನ್ 'ಎ' ಮತ್ತು 'ಡಿ'ಯನ್ನು ಒಳಗೊಂಡ ಒಂದು ಲೀಟರ್ ಬಲವರ್ಧಿತ ತಾಳೆಎಣ್ಣೆಯನ್ನು ವಿತರಿಸಲು ಆದೇಶಿಸಿದೆ.

**P.R. 508**
**S.C. 200**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅರ್ಚನ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನ ಶಾಸ್ತ್ರ ಇಲಾಖೆ.

## FINANCE SECRETARIAT

### CORRIGENDUM

**No. FD 96 CSL 2015,Bengaluru, dated : 20-07-2016.**

In the Order portion of the Government Order No. FD 96 CSL 2015, dated : 01-01-2016 issued in favour of M/s Karnataka Silk Industries Corporation Ltd., Bengaluru, for waiving of penalty, the Revenue Receipt Head of Account "0040-00-110-1-07" is replaced as '0042-00-106-0-03 – Waiver of Penalty Dues – KSIC."

**P.R. 509**

By order and in the name of the Governor of Karnataka
**K.S. Padmavathi**
Under Secretary to Government
Finance Department (CT-1).

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳ ಇಲಾಖೆಯಲ್ಲಿ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.

2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 14–03–2016ರ ಸರ್ಕಾರಿ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಸರ್ಕಾರಿ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7 ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು,, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ : 22–06–2016ರ ಸರ್ಕಾರಿ ಆದೇಶದ ಭಾಗದ ಕಂಡಿಕೆ 1(1)ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ನಂತರದ ಅಧಿಕಾರಿಯನ್ನು (Officer next in seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಸಂಸದೀಯ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಂವ್ಯಶಾಇ 116 ಆಡಳಿತ 2016(1), ಬೆಂಗಳೂರು, ದಿನಾಂಕ : 12–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಸಂಸದೀಯ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದಂತೆ, ಶ್ರೀ ಜಿ. ಶ್ರೀಧರ್ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ–ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 510**

**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳ ಇಲಾಖೆಯಲ್ಲಿ ಆಡಳಿತ ವ್ಯಾಪ್ತಿಯಲ್ಲಿ ಬರುವ ಭಾಷಾಂತರ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.

2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7 ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ : 22–06–2016ರ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರ ಸ್ಥಾನದ ಕಛೇರಿಗಳಲ್ಲಿ ಒಂದು

ಜಾಗೃತ ಕೋಶ ಇರತಕ್ಕದ್ದೆಂದು ಹಾಗೂ ಆಯಾ ಇಲಾಖೆ/ಸಂಸ್ಥೆಗಳ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ರವರನ್ನು ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಸಂಸದೀಯ ವ್ಯವಹಾರಗಳ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಭಾಷಾಂತರ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಂವ್ಯಶಾಇ 116 ಆಡಳಿತ 2016(2), ಬೆಂಗಳೂರು, ದಿನಾಂಕ : 12-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಂಸದೀಯ ವ್ಯವಹಾರಗಳ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಭಾಷಾಂತರ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ, ಶ್ರೀ ಎಂ. ನಾರಾಯಣಸ್ವಾಮಿ, ಸಹಾಯಕ ನಿರ್ದೇಶಕರು-ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 511**

**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016-17ನೇ ಸಾಲಿಗೆ ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ನಬಾರ್ಡ್‌ನಿಂದ ಸಾಲ ಪಡೆಯಲು ಸರ್ಕಾರ ಖಾತರಿ ನೀಡುವ ಕುರಿತು ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 211 ಸಿಎಲ್‌ಎಸ್ 2015, ದಿನಾಂಕ : 18-08-2015.
2. ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಲ್‌ಡಿಬಿ-2/33/2015-16, ದಿನಾಂಕ : 02-04-2016 ಮತ್ತು ದಿನಾಂಕ : 22-06-2016.

**ಪ್ರಸ್ತಾವನೆ :**

ರಾಜ್ಯದ ರೈತರ ಮತ್ತು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳ ಮೂಲಕ ದೀರ್ಘಾವಧಿ ಕೃಷಿ ಸಾಲಗಳನ್ನು ಕಸ್ಕಾರ್ಡ್ ಬ್ಯಾಂಕ್ ವಿತರಣೆ ಮಾಡುತ್ತಿದೆ. ನೇರ ಸಾಲದ ಪದ್ಧತಿಯಲ್ಲಿ ನಬಾರ್ಡ್, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದಿಂದ ಪುನರ್ಧನ ಪಡೆದು ಸಂಪನ್ಮೂಲಗಳನ್ನು ರೂಢಿಸಿಕೊಳ್ಳುತ್ತದೆ. ನಬಾರ್ಡಿನ ಮಾರ್ಗದರ್ಶನದಂತೆ, ಬ್ಯಾಂಕು ವಿವಿಧ ಉದ್ದೇಶಗಳಿಗೆ ಸಾಲಗಳನ್ನು ನೀಡುತ್ತಿದ್ದು, ಈ ಸಾಲಗಳ ಬಡ್ಡಿದರ, ಮರುಪಾವತಿ ಅವಧಿ ಮುಂತಾದ ನಿಬಂಧನೆಗಳನ್ನು ನಬಾರ್ಡ್ ನಿಗಧಿಪಡಿಸುವಂತೆ ಜಾರಿಗೊಳಿಸಲಾಗುತ್ತಿದೆ. ರಾಜ್ಯ ಸರ್ಕಾರವು ಬ್ಯಾಂಕಿನ ಪರವಾಗಿ ನಬಾರ್ಡ್‌ಗೆ ಖಾತರಿಯನ್ನು ನೀಡಿ ಪ್ರೋತ್ಸಾಹಿಸಿಕೊಂಡು ಬಂದಿರುತ್ತದೆ.

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಸ್ಕಾರ್ಡ್ ಬ್ಯಾಂಕ್ ನಬಾರ್ಡ್‌ನಿಂದ ರೂ. 1550.00 ಕೋಟಿಗಳವರೆಗೆ ಸಾಲ ಪಡೆಯಲು ದಿನಾಂಕ : 31-03-2016ರವರೆಗೆ ನೀಡಿದ್ದ ಖಾತರಿ ಅವಧಿಯು ಮುಕ್ತಾಯವಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ ಖಾತರಿ ಅವಧಿಯನ್ನು ದಿನಾಂಕ : 01-04-2016 ರಿಂದ 31-03-2017 ರವರೆಗೆ ವಿಸ್ತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ :. ಸಿಒ 191 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 16-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕಸ್ಕಾರ್ಡ್ ಬ್ಯಾಂಕ್ ನಬಾರ್ಡ್‌ಗೆ ಪಾವತಿಸಬೇಕಾದ ಹೊರಬಾಕಿಯನ್ನು ಒಳಗೊಂಡು 2016-17ನೇ ಸಾಲಿಗೆ ರೂ. 1550.00 ಕೋಟಿಗಳ (ಒಂದು ಸಾವಿರದ ಐದು ನೂರ ಐವತ್ತು ಕೋಟಿ ರೂಪಾಯಿಗಳು ಮಾತ್ರ) ಮೊತ್ತಕ್ಕೆ ದಿನಾಂಕ : 01-04-2016 ರಿಂದ ದಿನಾಂಕ : 31-03-2017ರವರೆಗೆ ಸರ್ಕಾರದ ಖಾತರಿಯನ್ನು ನೀಡಲು ಶೇ. 1ರ ಖಾತರಿ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸುವ ಷರತ್ತಿಗೊಳಪಟ್ಟು ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 99 ಇಎಕ್ಸ್‌ಪಿ-2/2016 ದಿನಾಂಕ : 16-06-2016ರ ಸಹಮತಿಯೊಂದಿಗೆ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 9ರ ಮೊದಲನೇ ಅನುಸೂಚಿಯನ್ವಯ ಹೊರಡಿಸಲಾಗಿದೆ.

**P.R. 512**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ-3
ಸಹಕಾರ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 3425-60-200-0-16(101) (ಯೋಜನೆ) ಇದರಡಿ ಬಾಕಿ ಉಳಿದ ಅನುದಾನವನ್ನು ವಿಜ್ಞಾನ ಗ್ಯಾಲರಿ, ಬೆಂಗಳೂರು ಸ್ಥಾಪನೆಗಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ವಿಯಇ 141 ವಿತ್ರಮ 2015, ದಿನಾಂಕ : 30–04–2015.

2. ಸರ್ಕಾರದ ಆದೇಶ ಸಂಖ್ಯೆ : ವಿಯಇ 191 ವಿತ್ರಮ 2015, ದಿನಾಂಕ :08–06–2015 ಮತ್ತು ವಿಯಇ 145 ವಿತ್ರಮ 2015 ದಿನಾಂಕ : 23–09–2015.

3. ಸರ್ಕಾರಿ ಆದೇಶ ಸಂಖ್ಯೆ : ವಿಯಇ 191 ವಿತ್ರಮ 2015, ದಿನಾಂಕ : 23–12–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ, 2015–16ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 3425–60–200–0–16(101) (ಯೋಜನೆ) ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ. 617.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶಗಳಲ್ಲಿ ಲೆಕ್ಕಶೀರ್ಷಿಕೆ 3425–60–200–0–16(101) (ಯೋಜನೆ) ಇದರಡಿ ಕಾಯ್ದಿರಿಸಿರುವ ಮೊತ್ತದಲ್ಲಿ ಮೊದಲನೇ ಕಂತಿನ ಅನುದಾನ ರೂ. 200.00 ಲಕ್ಷಗಳು ಹಾಗೂ **ವಿಜಯಪುರ ಮಹಿಳಾ ವಿಶ್ವವಿದ್ಯಾಲಯದಲ್ಲಿ ಭಾಸ್ಕರಾಚಾರ್ಯರ ಹೆಸರಿನಲ್ಲಿ ಅಧ್ಯಯನ ಪೀಠ ಸ್ಥಾಪಿಸಲು ರೂ. 50.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.**

**ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಲೆಕ್ಕ ಶೀರ್ಷಿಕೆ 3425–60–200–0–16(101) (ಯೋಜನೆ) ಇದರಡಿ ಬಾಕಿ ಅನುದಾನ ರೂ. 367.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿ, ಬೆಂಗಳೂರು ರವರು ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆ ಅಡಿಯಲ್ಲಿ ಕ್ರಮಾಂಕ (2) ಮತ್ತು (3)ರ ಆದೇಶಗಳಲ್ಲಿ ಬಿಡುಗಡೆ ಮಾಡಲಾದ ರೂ. 417.00 ಲಕ್ಷಗಳಲ್ಲಿ ರೂ. 333.50 ಲಕ್ಷಗಳನ್ನು ಮಾತ್ರ ಉಪಯೋಗಿಸಿದ್ದು, ರೂ. 83.50 ಲಕ್ಷಗಳು ಬಾಕಿ ಉಳಿದಿದ್ದು, ಪ್ರಸ್ತುತ ಈ ಕಾರ್ಯಕ್ರಮಕ್ಕೆ ಹಣದ ಅವಶ್ಯಕತೆಯಿಲ್ಲದಿರುವುದರಿಂದ, ವಿಜ್ಞಾನ ಗ್ಯಾಲರಿ, ಬೆಂಗಳೂರು ಯೋಜನೆಯ Head of Project Delivery (HoPD) ನೇಮಕಾತಿಗೆ ಬೇಕಾಗುವ ವೇತನ ವೆಚ್ಚ ಪ್ರವಾಸ ಭತ್ಯೆ ಹಾಗೂ ಇತರೆ ನಿರ್ವಹಣಾ ವೆಚ್ಚಗಳಿಗೆ ಉಪಯೋಗಿಸಲು ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಬೇಡಿಕೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 142 ವಿತ್ರಮ 2016, ಬೆಂಗಳೂರು, ದಿನಾಂಕ : 19–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆ ಲೆಕ್ಕಶೀರ್ಷಿಕೆ 3425–60–200–0–16(101) ಅಡಿಯಲ್ಲಿ ಬಾಕಿ ಉಳಿದಿರುವ ಅನುದಾನ ರೂ. 83.50 ಲಕ್ಷಗಳನ್ನು ವಿಜ್ಞಾನ ಗ್ಯಾಲರಿ, ಬೆಂಗಳೂರು ಸ್ಥಾಪನೆಗೆ ವಿನಿಯೋಗಿಸಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿ, ಬೆಂಗಳೂರು. ಈ ಸಂಸ್ಥೆಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಮಂಜೂರು ಮಾಡಿದೆ.

1. **ಈ ವೆಚ್ಚವನ್ನು ಆಯವ್ಯಯದ ಲೆಕ್ಕಶೀರ್ಷಿಕೆ 3425–60–200–0–16(101) (ಯೋಜನೆ) ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳಿಗೆ ಸಹಾಯನುದಾನ ಇದರಡಿಯಲ್ಲಿ ವಿಜ್ಞಾನ ಗ್ಯಾಲರಿ, ಬೆಂಗಳೂರು ಸ್ಥಾಪನೆಗೆ ಭರಿಸತಕ್ಕದ್ದು.**
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿ, ಬೆಂಗಳೂರು ಇವರು ಸ್ವೀಕೃತ ರಸೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಅಥವಾ ಪೀಠಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.
3. ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯಾವುದೇ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ಉಪಯೋಗಿಸತಕ್ಕದ್ದಲ್ಲ.
4. ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಕರ್ನಾಟಕ ಆರ್ಥಿಕ ಸಂಹಿತೆ 161(5)(iii)ರಂತೆ ಲೆಕ್ಕ ಪರಿಶೋಧಕರಿಂದ ಪರೀಕ್ಷಿಸಲ್ಪಟ್ಟ ಲೆಕ್ಕ ಪತ್ರಗಳ ಉಪಯೋಗಿತಾ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.
5. ಸಂಸ್ಥೆಗಳು ಅನುದಾನ ಸದುಪಯೋಗಪಡಿಸಿಕೊಂಡು ಸಲ್ಲಿಸುವ ಉಪಯೋಗಿತಾ ಪ್ರಮಾಣ ಪತ್ರಗಳನ್ನು ಪ್ರಧಾನ ಮಹಾಲೇಖಪಾಲರು, ಕರ್ನಾಟಕರವರು ಪರಿಶೀಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : FD 5 TFP 2014, ದಿನಾಂಕ : 14–10–2014ರಡಿಯಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

**P.R. 513**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ಟಿ.ಎ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ವಿಜಯಪುರದಲ್ಲಿ ಕಿರು ತಾರಾಲಯವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**
1. 2016–17ನೇ ಸಾಲಿನ ಆಯವ್ಯಯ ಭಾಷಣದ ಖಂಡಿಕೆ–394.
2. ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಯೋಇ/55/ಜಶ/2016 ದಿನಾಂಕ : 28–05–2016.
3. ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಯೋಇ/55/ಜಶ/2016 ದಿನಾಂಕ : 02–07–2016.
4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 108 ವೆಚ್ಚ 2/2016 ದಿನಾಂಕ : 24–05–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ 2016–17ನೇ ಸಾಲಿನ ಆಯವ್ಯಯ ಭಾಷಣದ ಖಂಡಿಕೆ–394 ರಲ್ಲಿ ವಿಜಯಪುರದಲ್ಲಿ ಕಿರು ತಾರಾಲಯವನ್ನು ಸ್ಥಾಪಿಸಲಾಗುವುದೆಂದು ಸನ್ಮಾನ್ಯ ಮುಖ್ಯ ಮಂತ್ರಿಗಳು ಘೋಷಿಸಿರುತ್ತಾರೆ. ಸದರಿ ಕಿರು ತಾರಾಯಲಯವನ್ನು ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದಂತೆ ಸಂಶೋಧನೆಗೆ ಹಾಗೂ ವಿದ್ಯಾರ್ಥಿಗಳಿಗೆ ವಿಜ್ಞಾನ ಮತ್ತು ತಂತ್ರಜ್ಞಾನ ಬೆಳವಣಿಗೆಯ ಬಗ್ಗೆ ಆಸಕ್ತಿ, ಕ್ರಿಯಾಶೀಲತೆ, ಕುತೂಹಲ ಹಾಗೂ ವೈಜ್ಞಾನಿಕತೆಯ ಕುರಿತು ಅರಿವು ಮೂಡಿಸುವ ಒಂದು ಸ್ಫೂರ್ತಿದಾಯಕ ಕೇಂದ್ರವಾಗಿ ಹೊರಹೊಮ್ಮಲಿದೆ. ಈ ಉದ್ದೇಶಿತ ಅಧ್ಯಯನ ಪೀಠವನ್ನು ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದಲ್ಲಿ ರೂ. 570.00 ಲಕ್ಷಗಳ ವೆಚ್ಚದಲ್ಲಿ ಸಂಪೂರ್ಣವಾಗಿ ರಾಜ್ಯ ಸರ್ಕಾರದ ಅನುದಾನದಲ್ಲಿ ಅವಶ್ಯವಿರುವ ಭೂಮಿ ಆಯ್ಕೆ, ಯೋಜನಾ ವರದಿ ತಯಾರಿಕೆ ಇತ್ಯಾದಿ ಪೂರ್ವಸಿದ್ಧತಾ ಕಾರ್ಯಗಳನ್ನು ಕೈಗೊಂಡು ಇಲಾಖೆಗೆ ಒದಗಿಸಿರುವ ಅನುದಾನ ಲಭ್ಯತೆ ಮೇರೆಗೆ ಕೆಸ್ಟೆಪ್ಸ್ ವತಿಯಿಂದ ಕಿರು ತಾರಾಲಯದ ಸ್ಥಾಪನಾ ಕಾರ್ಯ ಕೈಗೊಳ್ಳಲು ಉದ್ದೇಶಿಸಲಾಗಿದೆ.

ಮೇಲೆ ಓದಲಾದ ಸಂಖ್ಯೆ (2) ಮತ್ತು (3)ರ ಟಿಪ್ಪಣಿಗಳಲ್ಲಿ ಯೋಜನಾ ಇಲಾಖೆಯು 2016–17ನೇ ಸಾಲಿನಲ್ಲಿ ಇಲಾಖೆಗೆ ಲಭ್ಯವಿರುವ ಅನುದಾನದಡಿಯಲ್ಲಿ ಸದರಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಹೆಚ್ಚಿನ ಅನುದಾನಬೇಕಾದಲ್ಲಿ ಆರ್ಥಿಕ ಇಲಾಖೆಯನ್ನು ಕೋರಬಹುದೆಂದು ತಿಳಿಸುತ್ತಾ, ವಿಜಯಾಪುರದಲ್ಲಿ ಕಿರು ತಾರಾಲಯವನ್ನು ಸ್ಥಾಪಿಸುವ ಪ್ರಸ್ತಾವನೆಗೆ ಸಹಮತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಯೋಜನಾ ಇಲಾಖೆಯ ಸಹಮತಿ ಪಡೆಯುವ ಷರತ್ತಿಗೊಳಪಟ್ಟು ತಾತ್ವಿಕವಾಗಿ ಸಹಮತಿ ನೀಡಿರುತ್ತದೆ.

2016–17ನೇ ಸಾಲಿನ ಈ ಹೊಸ ಯೋಜನೆಗೆ ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಗಳು ತಾತ್ವಿಕ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ವಿಜಯಪುರದಲ್ಲಿ ಕಿರು ತಾರಾಲಯವನ್ನು ರೂ. 570.00 ಲಕ್ಷಗಳ ವೆಚ್ಚದಲ್ಲಿ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡಲು ನಿರ್ಧರಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 84 ವಿತ್ರಮ 2016, ಬೆಂಗಳೂರು, ದಿನಾಂಕ : 19–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೆಸ್ಟೆಪ್ಸ್ ಸಹಯೋಗದೊಂದಿಗೆ ವಿಜಯಪುರದಲ್ಲಿ ಕಿರು ತಾರಾಲಯವನ್ನು ರೂ. 575.00 ಲಕ್ಷಗಳ ಮಿತಿಗೊಳಪಟ್ಟು ಸ್ಥಾಪಿಸುವ ಪ್ರಸ್ತಾವನೆಗೆ ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ. ವ್ಯವಸ್ಥಾಪಕ ನಿರ್ದೇಶಕರು, ಕೆಸ್ಟೆಪ್ಸ್ ಸಂಸ್ಥೆ ಇವರು ಟೆಂಡರ್ ಕರೆಯುವ ಸಮಯದಲ್ಲಿ 2D ಅಥವಾ 3D ಬಗ್ಗೆ ಲಭ್ಯವಿರುವ ಅಂಶಗಳ ಪಟ್ಟಿಯೊಂದಿಗೆ ಪ್ರತ್ಯೇಕ ಕೋಟ್ಸ್ ಪಡೆದು ಸರ್ಕಾರದ ಅನುಮೋದನೆ ಪಡೆಯಲು ಸಹ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 108 ವೆಚ್ಚ 2/2016, ದಿನಾಂಕ : 24–05–2016 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಯೋಇ/55/ಜಶ/2016, ದಿನಾಂಕ : 02–07–2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**P.R. 514**

**S.C. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ಟಿ.ಎ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ತಾರಾಲಯವನ್ನು ಸ್ಥಾಪಿಸಲು ಉನ್ನತ ತಾಂತ್ರಿಕ ಸಲಹಾ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ :**
1. ಆದೇಶ ಸಂಖ್ಯೆ : ವಿಯಇ 38 ವಿತ್ರಮ 2011 ದಿನಾಂಕ : 27–05–2011.
2. ಪತ್ರ ದಿನಾಂಕ : 08–04–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯವನ್ನು ಸ್ಥಾಪಿಸಲು ಹಾಗೂ ಈ ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನವನ್ನು ನೀಡಲು, ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರ ರವರು ರಾಜೀನಾಮೆ ನೀಡಿದ್ದು, ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ತಾಂತ್ರಿಕ ಸಲಹಾ ಸಮಿತಿಯನ್ನು ನೇಮಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 140 ವಿತ್ರಮ 2016, ಬೆಂಗಳೂರು, ದಿನಾಂಕ : 19–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿನ ನೂತನ ತಾರಾಲಯದ ಅನುಷ್ಠಾನಕ್ಕೆ ಮಾರ್ಗದರ್ಶನವನ್ನು ನೀಡಲು, ಕೆಳಕಂಡ ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ.

| | | | |
|---|---|---|---|
| 1. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿ, ಬೆಂಗಳೂರು. /ವಿಶೇಷ ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. | – | ಅಧ್ಯಕ್ಷರು |
| 2. | ಶ್ರೀ ಅರುಲ್ ಜೆರಾಲ್ಡ್ ಪ್ರಕಾಶ್, ನಿರ್ದೇಶಕರು, ಕೇರಳ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ವಸ್ತು ಸಂಗ್ರಹಾಲಯ, ತಿರುವಂತನಪುರ. | – | ಸದಸ್ಯರು |
| 3. | ಡಾ॥ ಐ.ಎಂ. ಪೆರುಮಾಳ್, ಕಾರ್ಯನಿರ್ವಾಹಕ ನಿರ್ದೇಶಕರು, ತಮಿಳುನಾಡು ವಿಜ್ಞಾನ ಮತ್ತು ತಂತ್ರಜ್ಞಾನ ಕೇಂದ್ರ, ಚೆನ್ನೈ. | – | ಸದಸ್ಯರು |
| 4. | ಸದಸ್ಯ ಕಾರ್ಯದರ್ಶಿ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ | – | ಸದಸ್ಯ ಕಾರ್ಯದರ್ಶಿ |

ಈ ಉನ್ನತ ಸಮಿತಿಯು ಕೆಳಕಂಡಂತೆ ಪರಿಶೀಲಿಸಿ ಸಮಗ್ರ ವರದಿಯನ್ನು ಸಲ್ಲಿಸಲು ಆದೇಶಿಸಿದೆ.

ಅ) ತಾರಾಲಯ ಕಟ್ಟಡ ನಿರ್ಮಾಣಕ್ಕೆ ವಾಸ್ತುಶಿಲ್ಪಿ/ಆರ್ಕಿಟೆಕ್ಟ್, ಸಿವಿಲ್ ಕಾಮಗಾರಿಗಳ ನಿರ್ದಿಷ್ಟ ಅಂಶಗಳು ಮತ್ತು ವಿನ್ಯಾಸ ಹಾಗೂ ಇತರ ಪೂರಕ ಅಂಶಗಳನ್ನು ನಿರ್ಧರಿಸುವುದು.

ಆ) ತಾರಾಲಯದ ಕಟ್ಟಡದ ನಿರ್ಮಾಣಕ್ಕೆ ಟೆಂಡರು ವಿವರಗಳ ಮತ್ತು ತಾರಾಲಯಕ್ಕೆ ಸಂಬಂಧಪಟ್ಟ ಉಪಕರಣಗಳು ಮತ್ತು ಇತರ ಮೂಲಸೌಕರ್ಯಗಳನ್ನು ನಿರ್ಧರಿಸುವುದು.

ಇ) ತಾರಾಲಯಕ್ಕೆ ಅತ್ಯಧುನಿಕ ಪ್ರೊಜೆಕ್ಟರ್ ವ್ಯವಸ್ಥೆಯ ಅನುಷ್ಠಾನಕ್ಕೆ ವಿವರಗಳನ್ನು ಹಾಗೂ ಅಂತಹ ಪ್ರೊಜೆಕ್ಟರ್ ವ್ಯವಸ್ಥೆಗಾಗಿ ಅಂತರ ರಾಷ್ಟ್ರೀಯವಾಗಿ ಟೆಂಡರು ಪ್ರಕ್ರಿಯೆಗಳನ್ನು ನಿಯಮಾನುಸಾರ ಸಿದ್ಧಪಡಿಸುವುದು.

ಈ) ತಾರಾಲಯದ ಪರಿಕರ/ಉಪಕರಣ/ಪ್ರೊಜೆಕ್ಟರ್/ಕಟ್ಟಡ ಕಾಮಗಾರಿಗಳು ಮತ್ತಿತರ ಮೂಲಸೌಕರ್ಯಗಳ ಸಂಬಂಧದ ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳನ್ನು ಮೌಲ್ಯಮಾಪನಗೊಳಿಸಿ ನಿರ್ಧರಿಸುವುದು.

ಉ) ತಾರಾಲಯದ ಯೋಜಿತ ಕಾರ್ಯಗಳು ಮತ್ತು ಅದರ ಸಂಬಂಧಿತ ಪ್ರಕ್ರಿಯೆಗಳ ಅನುಷ್ಠಾನ ಮತ್ತು ಪ್ರಗತಿಯ ಮೇಲುಸ್ತುವಾರಿ/ನಿಗಾವಹಿಸುವುದು.

**P.R. 515**
**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ಟಿ.ಎ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯ ಅಭಿವೃದ್ಧಿ ಮಂಡಳಿ, ಕಲಬುರಗಿ, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯ 2016, ದಿನಾಂಕ : 14–03–2016.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯ 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ, ಪರಿಶೀಲಿಸಿ, ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯ ಅಭಿವೃದ್ಧಿ ಮಂಡಳಿ, ಕಲಬುರಗಿ ಇದರ ಕೇಂದ್ರ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :. ಯೋಇ 60(7) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಪ ಕಾರ್ಯದರ್ಶಿ, ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯ ಅಭಿವೃದ್ಧಿ ಮಂಡಳಿ, ಕಲಬುರಗಿ, ಇವರನ್ನು ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯ ಅಭಿವೃದ್ಧಿ ಮಂಡಳಿ, ಕಲಬುರಗಿ, ಇದರ ಕೇಂದ್ರ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 516**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇದರ ಜಿಲ್ಲಾ ಮಟ್ಟದ ಕಛೇರಿಗಳಿಗೆ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.

2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(3)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಜಾಗೃತ ಅಧಿಕಾರಿ (Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ ಪರಿಶೀಲಿಸಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇದರ ಜಿಲ್ಲಾ ಮಟ್ಟದ ಕಛೇರಿಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :. ಯೋಇ 60(6) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಆದೇಶದ ಅನುಬಂಧದಲ್ಲಿ ತೋರಿಸಿರುವ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 21 ಜಿಲ್ಲೆಗಳಲ್ಲಿನ ಜಿಲ್ಲಾ ಕಛೇರಿಗಳಿಗೆ 20 ಸಹಾಯಕ ನಿರ್ದೇಶಕರು (ಸಾಂಖ್ಯಿಕ) ಗಳನ್ನು ಮತ್ತು ಒಬ್ಬ ಹಿರಿಯ ಸಹಾಯಕ ಸಾಂಖ್ಯಿಕ ಅಧಿಕಾರಿ ಇವರುಗಳನ್ನು ಜಾಗೃತ ಅಧಿಕಾರಿ (Vigilance Officer) ಗಳನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ : ಯೋಇ 60(6) ಯೋಪರ–2016, ದಿನಾಂಕ : 14–07–2016.**

**(ಈ ಕೆಳಕಂಡ 21 ಜಿಲ್ಲೆಗಳಿಗೆ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ಸೇವೆಗೆ ಸೇರಿದ ಸಹಾಯಕ ನಿರ್ದೇಶಕರು (ಸಾಂಖ್ಯಿಕ) ಇವರುಗಳನ್ನು ಜಾಗೃತ ಅಧಿಕಾರಿಗಳನ್ನಾಗಿ ನೇಮಿಸಿದೆ)**

| ಕ್ರ. ಸಂ. | ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಗೆ ಸೇರಿದ ಜಲ್ಲಾ ವ್ಯಾಪ್ತಿಯ ಕಛೇರಿಯ ಹೆಸರು | ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಗೆ ಸೇರಿದ ಜಿಲ್ಲಾ ಮಟ್ಟದ ಕಛೇರಿಗಳಿಗೆ ನೇಮಕ ಮಾಡಿದ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ |
|---|---|---|
| 1 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಧಾರವಾಡ | ಸಹಾಯಕ ನಿರ್ದೇಶಕರು |
| 2 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಶಿವಮೊಗ್ಗ | ಹಿರಿಯ ಸಹಾಯಕ ಸಾಂಖ್ಯಿಕ ಅಧಿಕಾರಿ |
| 3 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ | ಸಹಾಯಕ ನಿರ್ದೇಶಕರು |
| 4 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ | ಸಹಾಯಕ ನಿರ್ದೇಶಕರು |
| 5 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಮೈಸೂರು | ಸಹಾಯಕ ನಿರ್ದೇಶಕರು |
| 6 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿತ್ರದುರ್ಗ | ಸಹಾಯಕ ನಿರ್ದೇಶಕರು |
| 7 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ, (ಮಂಗಳೂರು) | ಸಹಾಯಕ ನಿರ್ದೇಶಕರು |
| 8 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ | ಸಹಾಯಕ ನಿರ್ದೇಶಕರು |
| 9 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಕೋಲಾರ | ಸಹಾಯಕ ನಿರ್ದೇಶಕರು |
| 10 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಾಗಲಕೋಟೆ | ಸಹಾಯಕ ನಿರ್ದೇಶಕರು |
| 11 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಯಪುರ | ಸಹಾಯಕ ನಿರ್ದೇಶಕರು |
| 12 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಮಂಡ್ಯ | ಸಹಾಯಕ ನಿರ್ದೇಶಕರು |
| 13 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಯಚೂರು | ಸಹಾಯಕ ನಿರ್ದೇಶಕರು |
| 14 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಕಲಬುರ್ಗಿ | ಸಹಾಯಕ ನಿರ್ದೇಶಕರು |
| 15 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ತುಮಕೂರು | ಸಹಾಯಕ ನಿರ್ದೇಶಕರು |
| 16 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಉತ್ತರ ಕನ್ನಡ (ಕಾರವಾರ) | ಸಹಾಯಕ ನಿರ್ದೇಶಕರು |
| 17 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಹಾಸನ | ಸಹಾಯಕ ನಿರ್ದೇಶಕರು |
| 18 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಹಾವೇರಿ | ಸಹಾಯಕ ನಿರ್ದೇಶಕರು |
| 19 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ | ಸಹಾಯಕ ನಿರ್ದೇಶಕರು |
| 20 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿಕ್ಕಬಳ್ಳಾಪುರ | ಸಹಾಯಕ ನಿರ್ದೇಶಕರು |
| 21 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಯಾದಗಿರಿ | ಸಹಾಯಕ ನಿರ್ದೇಶಕರು |

**P.R. 517**

**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ ಪರಿಶೀಲಿಸಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇದರ ಕೇಂದ್ರ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :, ಯೋಇ 60(5) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಪರ ನಿರ್ದೇಶಕರು ಹಾಗೂ ಜನನ ಮರಣ ಮುಖ್ಯ ನೊಂದಣಾಧಿಕಾರಿಗಳು, ಕೇಂದ್ರ ಕಛೇರಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇದರ ಕೇಂದ್ರ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 518**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ, ಬೆಂಗಳೂರು, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ ಪರಿಶೀಲಿಸಿ, ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ, ಬೆಂಗಳೂರು ಇದರ ಮುಖ್ಯ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :. ಯೋಇ 60(4) ಯೋಪರ 2016, ಬೆಂಗಳೂರು, ದಿನಾಂಕ : 14-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಡಳಿತಾಧಿಕಾರಿ, ಮುಖ್ಯ ಕಛೇರಿ, ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ, ಬೆಂಗಳೂರು ಇವರನ್ನು ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ, ಬೆಂಗಳೂರು, ಇದರ ಮುಖ್ಯ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 519**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ-1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ, ಮತ್ತು ಸಾಂಖ್ಯಿಕ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016-17ನೇ ಸಾಲಿನಲ್ಲಿ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಮೊದಲ ಕಂತಿನ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಸಇ 115 ರರವಿ 2016, ದಿನಾಂಕ: 26.04.2016.

(2) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ: 02.04.2016.

(3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಯಶಸ್ವಿನಿ/5/2016-17, ದಿನಾಂಕ: 07.05.2016.

**ಪ್ರಸ್ತಾವನೆ :**

2016-17ನೇ ಸಾಲಿನಲ್ಲಿ ಸಹಕಾರ ಇಲಾಖೆಯಲ್ಲಿ ಯಶಸ್ವಿನಿ ಯೋಜನೆಗಳನ್ನು ಮುಂದುವರೆಸಿದ್ದು, ಲೆಕ್ಕಶೀರ್ಷಿಕೆ 2425-00-108-0-57ರಲ್ಲಿ ಈ ಯೋಜನೆಗೆ ₹. 16911.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿ ಈ ಯೋಜನೆಯನ್ನು ಮುಂದುವರೆಸಲು ಓದಲಾದ (1)ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕಂಡಿಕೆ (12)ರನ್ವಯ ₹. 1000.00 ಲಕ್ಷಗಳಿಗೂ ಹೆಚ್ಚಿಗೆ ಹಂಚಿಕೆ ಆಗಿರುವ ಆಯವ್ಯಯದ ಅವಕಾಶದ ಪೈಕಿ ಶೇ. 25ರಂತೆ ಮೊದಲ ಮೂರು ಕಂತುಗಳನ್ನು ಇಲಾಖೆಯ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿಗಳಿಗೆ ಬಿಡುಗಡೆ ಮಾಡಲು ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2016-17ನೇ ಸಾಲಿಗೆ ಯಶಸ್ವಿನಿ ಯೋಜನೆಗಳ ಅನುಷ್ಠಾನಕ್ಕಾಗಿ ಆಯವ್ಯಯದಲ್ಲಿ ಕಲ್ಪಿಸಲಾಗಿರುವ ₹. 16911.00 ಲಕ್ಷಗಳ ಅನುದಾನದ ಪೈಕಿ ಮೊದಲ ಕಂತಿನ ಹಣ ₹. 4227.75 ಮತ್ತು ಎರಡನೆ ಕಂತಿನ ಹಣ ₹. 4227.75ರಂತೆ ಒಟ್ಟು ₹. 8544.50 ಲಕ್ಷಗಳ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 277 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ: 01.06.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016-17ನೇ ಸಾಲಿಗೆ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಮೊದಲ ಕಂತಿನ ₹. 4227.75 ಲಕ್ಷಗಳನ್ನು (₹. ನಲವತ್ತೆರಡು ಕೋಟಿ ಇಪ್ಪತ್ತೇಳು ಲಕ್ಷದ ಎಪ್ಪತ್ತೈದು ಸಾವಿರಗಳು ಮಾತ್ರ) ಲೆಕ್ಕಶೀರ್ಷಿಕೆ "2425-00-108-0-57" ಯೋಜನೆ ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ಹೊರಡಿಸಿದೆ.

**(ಮೊತ್ತ ರೂ. ಲಕ್ಷಗಳಲ್ಲಿ)**

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವಿವರ | ಮೊದಲ ಕಂತಿನಲ್ಲಿ ಬಿಡುಗಡೆ ಮಾಡಬೇಕಾದ ಮೊತ್ತ |
|---|---|---|---|
| 1. | 2425-00-108-0-57-106 | ಇತರೆ ಖರ್ಚುಗಳು | 3409.50 |
| 2. | 2425-00-108-0-57-422 | ಪರಿಶಿಷ್ಟ ಜಾತಿ ಉಪಯೋಜನೆ | 478.50 |
| 3. | 2425-00-108-0-57-423 | ಗಿರಿಜನ ಉಪಯೋಜನೆ | 339.75 |
| | | **ಒಟ್ಟು ಮೊತ್ತ** | **4227.75** |

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲುರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ ಇವರು ಖಜಾನೆಯಿಂದ ಯಶಸ್ವಿನಿ ಯೋಜನೆಗೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಟ್ರಸ್ಟ್‌ನ ಉಳಿತಾಯ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ: 02-04-2016ರಲ್ಲಿ ಸರ್ಕಾರದ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಇ 61 ಆಂಆಸ(ಎ) 2016, ದಿನಾಂಕ: 31.05.2016ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**P.R. 431**

**S.C – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಸಿಒ 277 ಸಿಎಲ್‌ಎಸ್ 2016, ಬೆಂಗಳೂರು ದಿನಾಂಕ: 07–06–2016.**

2016–17ನೇ ಸಾಲಿನ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಒ 277 ಸಿಎಲ್‌ಎಸ್ 2016, ದಿನಾಂಕ: 01–06–2016ರ ಆದೇಶದ ಭಾಗದಲ್ಲಿ ಕ್ರಮ ಸಂಖ್ಯೆ (1)ರಲ್ಲಿನ ಲೆಕ್ಕಶೀರ್ಷಿಕೆ 2425–00–108–0–57–106 ಬದಲಾಗಿ, **"ಕ್ರಮ ಸಂಖ್ಯೆ (1)ರಲ್ಲಿನ ಲೆಕ್ಕಶೀರ್ಷಿಕೆ 2425–00–108–0–57–059"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**P.R. 432**

**S.C – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಒ 162 ಸಿಎಲ್‌ಎಸ್ 2015, ಬೆಂಗಳೂರು ದಿನಾಂಕ: 15.04.2016.

**ಪ್ರಸ್ತಾವನೆ :**

2016–17ನೇ ಸಾಲಿನ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರದ ಆದೇಶದಂತೆ ಜಾರಿಗೊಳಿಸಲಾಗಿದೆ. ಈ ಯೋಜನೆಯು ದಿನಾಂಕ: 20.04.2016ರಿಂದ ಪ್ರಾರಂಭವಾಗಿರುತ್ತದೆ. ಅಗತ್ಯ ಪ್ರಿಂಟಿಂಗ್ ಸಾಮಗ್ರಿಗಳು ಇತ್ತೀಚಿಗೆ ಸಂಘ ಸಂಸ್ಥೆಗಳಿಗೆ ತಲುಪಿರುವುದರಿಂದ ಹಾಗೂ ಪ್ರಸ್ತುತ ರಾಜ್ಯದಲ್ಲಿ ಬರಗಾಲವಿದ್ದು, ಡಿಸಿಸಿ ಬ್ಯಾಂಕುಗಳಿಂದ ಈವಾಗ ಸಾಲ ಸೌಲಭ್ಯವನ್ನು ಒದಗಿಸುತ್ತಿರುವುದರಿಂದ ಹಾಗೂ ಪ್ರಚಾರ ಕಾರ್ಯವನ್ನು ಹೆಚ್ಚಿನ ಪ್ರಮಾಣದಲ್ಲಿ ಕೈಗೊಂಡು ಪ್ರಸಕ್ತ ಸಾಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಯಶಸ್ವಿನಿ ಸದಸ್ಯರನ್ನು ನೊಂದಯಿಸಬೇಕಾಗಿರುತ್ತದೆ. ಈ ಯೋಜನೆಯ ನೋಂದಣಿ ಅವಧಿ ದಿನಾಂಕ: 31.05.2016ಕ್ಕೆ ಕೊನೆಗೊಳ್ಳುವುದರಿಂದ, ಗ್ರಾಮೀಣ ಯಶಸ್ವಿನಿ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಾವಣೆ ಮಾಡುವ ದೃಷ್ಟಿಯಿಂದ ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 162 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 01.06.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ: 31.07.2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

**P.R. 433**

**S.C – 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಒ 163 ಸಿಎಲ್‌ಎಸ್ 2015, ಬೆಂಗಳೂರು ದಿನಾಂಕ: 15.04.2016.

**ಪ್ರಸ್ತಾವನೆ :**

2016–17ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರದ ಆದೇಶದಂತೆ ಜಾರಿಗೊಳಿಸಲಾಗಿದೆ. ಈ ಯೋಜನೆಯು ದಿನಾಂಕ: 20.04.2016ರಿಂದ ಪ್ರಾರಂಭವಾಗಿರುತ್ತದೆ. ಅಗತ್ಯ ಪ್ರಿಂಟಿಂಗ್ ಸಾಮಗ್ರಿಗಳು ಇತ್ತೀಚಿಗೆ ಸಂಘ ಸಂಸ್ಥೆಗಳಿಗೆ ತಲುಪಿರುವುದರಿಂದ ಹಾಗೂ ಪ್ರಚಾರ ಕಾರ್ಯವನ್ನು ಹೆಚ್ಚಿನ ಪ್ರಮಾಣದಲ್ಲಿ ಕೈಗೊಂಡು ಪ್ರಸಕ್ತ ಸಾಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಯಶಸ್ವಿನಿ ಸದಸ್ಯರನ್ನು ನೊಂದಯಿಸಬೇಕಾಗಿರುತ್ತದೆ. ಈ ಯೋಜನೆಯ ನೋಂದಣಿ ಅವಧಿ ದಿನಾಂಕ: 31.05.2016ಕ್ಕೆ ಕೊನೆಗೊಳ್ಳುವುದರಿಂದ, ನಗರ

ಯಶಸ್ವಿನಿ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಾವಣೆ ಮಾಡುವ ದೃಷ್ಟಿಯಿಂದ ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 163 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 01.06.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ: 31.07.2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

**P.R. 434**

**S.C – 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ: 28.04.2016ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತಕರ ಘಟನೆಗೆ ಸಂಬಂಧಿಸಿದಂತೆ, ಹಾನಿಯಾಗಿರುವ ಆಸ್ತಿ ಪಾಸ್ತಿಗಳು ಮತ್ತು ಸಂತ್ರಸ್ಥರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಎಂ.ಎ.ಜಿ (1)/ಎಂಎಲ್ಒ:52:2016–17, ದಿನಾಂಕ: 13.05.2016.

2) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:06:ಸಿಆರ್‌ಆರ್:2014, ದಿನಾಂಕ: 18.08.2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರ ದಿನಾಂಕ: 13.05.2016ರ ಪತ್ರದಲ್ಲಿ ದಿನಾಂಕ: 28.04.2016ರಂದು ಚಾಮರಾಜನಗರ ತಾಲ್ಲೂಕು ಹೊಂಗನೂರು ಗ್ರಾಮದಲ್ಲಿ ಬೆಳಿಗ್ಗೆ 7.00 ಗಂಟೆಯ ಸಮಯದಲ್ಲಿ ಡಾ॥ ಬಿ.ಆರ್.ಅಂಬೇಡ್ಕರ್‌ರವರ ಕಟೌಟ್‌ಗೆ ಅಪಮಾನ ಮಾಡಿರುವ ಬಗ್ಗೆ ಎರಡು ಗುಂಪಿನ ನಡುವೆ ಗ್ರಾಮದಲ್ಲಿ ಗಲಭೆ ನಡೆದಿದ್ದು, ಸದರಿ ಗಲಭೆ/ಅಹಿತಕರ ಘಟನೆಯಲ್ಲಿ ಹಾನಿಗೀಡಾದ ಆಸ್ತಿ/ಪಾಸ್ತಿಗಳು ಹಾಗೂ ಸಂತ್ರಸ್ಥರ ವಿವರಗಳುಳ್ಳ ಅಂದಾಜು ಪಟ್ಟಿಯನ್ನು ತಯಾರಿಸಲು ದಿನಾಂಕ: 04.05.2016ರ ಅಧಿಕೃತ ಜ್ಞಾಪನದಂತೆ ನುರಿತ ಅಧಿಕಾರಿಗಳ ತಂಡವನ್ನು ನಿಯೋಜಿಸಿದ್ದು, ಆ ಅಧಿಕಾರಿಗಳ ತಂಡವು ದಿನಾಂಕ: 05.05.2016ರಂದು ಹೊಂಗನೂರು ಗ್ರಾಮಕ್ಕೆ ಭೇಟಿ ನೀಡಿ ಹಾನಿಯಾದ ಮನೆಗಳು ಮತ್ತು ಅಂಗಡಿಗಳ ಸ್ಥಳ ಪರಿಶೀಲನೆ ನಡೆಸಿ ಅಂದಾಜು ನಷ್ಟವನ್ನು ಸಿದ್ಧಪಡಿಸಿದ್ದು, ಗಲಭೆಯಲ್ಲಿ ಹಾನಿಗೊಳಗಾದ ಆಸ್ತಿ ಪಾಸ್ತಿಯ (25 ವಿವಿಧ ಅಂಗಡಿಗಳು ಮತ್ತು ವಾಹನಗಳು ಹಾಗೂ 72 ಮನೆಗಳು) ಒಟ್ಟು 97 ಸಂತ್ರಸ್ಥರಿಗೆ ₹. 17,04,500/–ಗಳ (ರೂಪಾಯಿಗಳು ಹದಿನೇಳು ಲಕ್ಷದ ನಾಲ್ಕು ಸಾವಿರದ ಐದು ನೂರು ಮಾತ್ರ) ಪರಿಹಾರವನ್ನು ಬಿಡುಗಡೆಗೊಳಿಸಲು ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರು ಪರಿಹಾರ ಧನವನ್ನು ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ: 28.04.2016ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತರ ಘಟನೆಗೆ ಸಂಬಂಧಿಸಿದಂತೆ, ಹಾನಿಗೀಡಾದ ಒಟ್ಟು 97 ಸಂತ್ರಸ್ಥರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 163 ಎಸ್ಎಸ್‌ಟಿ 2016, ಬೆಂಗಳೂರು, ದಿನಾಂಕ: 28.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ: 28.04.2016ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತಕರ ಘಟನೆಯಲ್ಲಿ ಹಾನಿಗೀಡಾದ ಆಸ್ತಿ–ಪಾಸ್ತಿಯ **(25 ವಿವಿಧ ಅಂಗಡಿಗಳು ಮತ್ತು ವಾಹನಗಳು ಹಾಗೂ 72 ಮನೆಗಳು) ಒಟ್ಟು 97** ಸಂತ್ರಸ್ಥರಿಗೆ ಈ ಕೆಳಕಂಡಂತೆ ಪರಿಹಾರ ಧನ ನಿಗಧಿಗೊಳಿಸಿ ಒಟ್ಟು ₹. 17,04,500/–ಗಳ (ರೂಪಾಯಿಗಳು ಹದಿನೇಳು ಲಕ್ಷದ ನಾಲ್ಕು ಸಾವಿರದ ಐದು ನೂರು ಮಾತ್ರ) ಗಳನ್ನು ಮಂಜೂರು ಮಾಡಿ ಆದೇಶಿಸಿದೆ.

| ಕ್ರ. ಸಂ. | ಹೆಸರು | ಮಂಜೂರು ಮಾಡಲಾದ ಮೊತ್ತ |
|---|---|---|
| 1 | ಅನ್ನಪೂರ್ಣ ಕೋಂ ಶಿವಣ್ಣನಾಯಕ | 20000 |
| 2 | ಶ್ರೀನಿವಾಸ ಬಿನ್ ಶಿವಣ್ಣನಾಯಕ | 40000 |
| 3 | ಜಯಮ್ಮ ಕೋಂ ರಾಚಶೆಟ್ಟಿ | 30000 |
| 4 | ನಾಗರಾಜನಾಯಕ ಬಿನ್ ಪುಟ್ಟನಿಂಗನಾಯಕ | 25000 |
| 5 | ನಾಗಮ್ಮ ಕೋಂ ಬಿಳಿಗಿರಿರಂಗನಾಯಕ | 25000 |
| 6 | ಮಹದೇವನಾಯಕ ಬಿನ್ ಮಾದನಾಯಕ | 30000 |
| 7 | ಸಿ ಧರಣೇಂದ್ರ ಬಿನ್ ಆರ್ ಚಿಕ್ಕನಂಜಯ್ಯ | 40000 |

| ಕ್ರ. ಸಂ. | ಹೆಸರು | ಮಂಜೂರು ಮಾಡಲಾದ ಮೊತ್ತ |
|---|---|---|
| 8 | ಬಂಗಾರನಾಯಕ ಬಿನ್ ಮುದ್ದನಾಯಕ | 32500 |
| 9 | ಆಸಿಫುಲ್ಲಾ ಶರೀಫ್ ಬಿನ್ ಹಾಜಿನೂರ್ ಷರೀಫ್ | 40000 |
| 10 | ಚಾಮಮ್ಮ ಕೋಂ ರೇವಶೆಟ್ಟಿ | 25000 |
| 11 | ಕಣ್ಣೇಗಾಲದ ಮಹದೇವನಾಯಕ ಬಿನ್ ಚಿಕ್ಕುನ್ನನಾಯಕ | 40000 |
| 12 | ಮಧು ಬಿನ್ ಮಹದೇವನಾಯಕ | 27500 |
| 13 | ತಮ್ಮಯ್ಯ ಬಿನ್ ನಿಂಗನಾಯಕ | 8000 |
| 14 | ಸುಬ್ಬಶೆಟ್ಟಿ ಬಿನ್ ದೊಡ್ಡಶೆಟ್ಟಿ | 27500 |
| 15 | ಶಿವಕುಮಾರ್ ಬಿನ್ ನಾಗರಾಜನಾಯಕ | 40000 |
| 16 | ರಂಗಸ್ವಾಮಿ ನಾಯಕ ಬಿನ್ ಬಸವನಾಯಕ | 25000 |
| 17 | ನಂಜುಂಡ ನಾಯಕ ಬಿನ್ ಬೊಕಳಿ ಬಸವನಾಯಕ | 25000 |
| 18 | ಮಹದೇವಶೆಟ್ಟಿ ಬಿನ್ ಅಂಕಶೆಟ್ಟಿ | 27500 |
| 19 | ಮರಿದಾಸಶೆಟ್ಟಿ ಬಿನ್ ಅಂಕಶೆಟ್ಟಿ | 40000 |
| 20 | ಶಿವಣ್ಣ ನಾಯಕ ಬಿನ್ ಪುರಿ ವೆಂಕಟನಾಯಕ | 40000 |
| 21 | ಸಾಕಮ್ಮ ಕೋಂ ಶ್ರೀನಿವಾಸನಾಯಕ | 27500 |
| 22 | ಭಾಗ್ಯಮ್ಮ ಕೋಂ ನಾರಾಯಣನಾಯಕ | 30000 |
| 23 | ನಾಗನಾಯಕ ಬಿನ್ ಮುದ್ದನಾಯಕ | 40000 |
| 24 | ರಂಗಣ್ಣನಾಯಕ ಬಿನ್ ಹನುಮಂತನಾಯಕ | 40000 |
| 25 | ಶೋಭಾ ಕೋಂ ಲೋಕೇಶಾಚಾರಿ | 20000 |
| 26 | ಪುಷ್ಪಮ್ಮ ಕೋಂ ಲೇ ಡ್ರೈವರ್ ನಾರಾಯಣ ನಾಯಕ | 8000 |
| 27 | ರಂಗಸ್ವಾಮಿನಾಯಕ ಬಿನ್ ನಾಗರಾಜನಾಯಕ | 10000 |
| 28 | ರತ್ನಮ್ಮ ಕೋಂ ನಾಗರಾಜ ನಾಯಕ | 10000 |
| 29 | ಬಸಮ್ಮ ಕೋಂ ಪುಟ್ಟಸ್ವಾಮಿ ನಾಯಕ | 8000 |
| 30 | ರುದ್ರನಾಯಕ ಬಿನ್ ಸುಬ್ಬನಾಯಕ | 8000 |
| 31 | ನಂಜಮ್ಮ ಕೋಂ ಕೃಷ್ಣನಾಯಕ | 8000 |
| 32 | ಸಾಕಮ್ಮ ಕೋಂ ರಂಗಣ್ಣನಾಯಕ | 8000 |
| 33 | ಚಿಕ್ಕತಾಯಮ್ಮ ಕೋಂ ನಿಂಗನಾಯಕ | 9000 |
| 34 | ಚಿಕ್ಕಮ್ಮ ಕೋಂ ಹುಚ್ಚನಾಯಕ | 8000 |
| 35 | ನಾಗಮ್ಮ ಕೋಂ ಚಿಕ್ಕಮಾದನಾಯಕ | 9000 |
| 36 | ಶಾಂತಮ್ಮ ಕೋಂ ಸುಬ್ಬನಾಯಕ | 10000 |
| 37 | ಚಿಕ್ಕತಾಯಮ್ಮ ಕೋಂ ರಂಗಸ್ವಾಮಿನಾಯಕ | 8000 |
| 38 | ನಾಗಮ್ಮ ಕೋಂ ಮರಿಸಿದ್ದನಾಯಕ | 25000 |
| 39 | ರಂಗನಾಯಕ ಬಿನ್ ಸುಬ್ಬನಾಯಕ | 8000 |
| 40 | ರಂಗನಾಯಕ ಬಿನ್ ಸುಬ್ಬನಾಯಕ | 10000 |
| 41 | ಮಂಗಮ್ಮ ಕೋಂ ಬಸವನಾಯಕ | 40000 |
| 42 | ಸುಬ್ಬಮ್ಮ ಕೋಂ ಲೇ ರಾಚನಾಯಕ | 20000 |
| 43 | ದೇವೀರಮ್ಮ ಕೋಂ ರಂಗನಾಯಕ | 15000 |
| 44 | ರಂಗಸ್ವಾಮಿನಾಯಕ ಬಿನ್ ಪುಟ್ಟರಂಗನಾಯಕ | 8000 |
| 45 | ಸಣ್ಣಮ್ಮ ಕೋಂ ಹನುಮನಾಯಕ | 15500 |
| 46 | ಹೆಚ್ ವಿ ಚಂದ್ರು ಬಿನ್ ವೆಂಕಟರಂಗನಾಯಕ | 9000 |

| ಕ್ರ. ಸಂ. | ಹೆಸರು | ಮಂಜೂರು ಮಾಡಲಾದ ಮೊತ್ತ |
|---|---|---|
| 47 | ಕಮಲಮ್ಮ ಕೋಂ ವೆಂಕಟರಂಗನಾಯಕ | 12000 |
| 48 | ಶಫಿವುಲ್ಲಾ ಬಿನ್ ಅಬ್ದುಲ್ ಅಮೀರ್ | 8000 |
| 49 | ಸರೋಜಮ್ಮ ಕೋಂ ಮುದ್ದರಾಮನಾಯಕ | 15000 |
| 50 | ಸಾಕಮ್ಮ ಕೋಂ ಮಂತ್ರನಾಯಕ | 9000 |
| 51 | ಮಹದೇವಮ್ಮ ಕೋಂ ಚಿಕ್ಕರಂಗನಾಯಕ | 8000 |
| 52 | ನಾಗರತ್ನಮ್ಮ ಕೋಂ ಜಯಶೀಲಾ | 8000 |
| 53 | ಶ್ರೀನಿವಾಸನಾಯಕ ಬಿನ್ ರಂಗಸ್ವಾಮಿನಾಯಕ | 9000 |
| 54 | ಭಾಗ್ಯಮ್ಮ ಕೋಂ ಕೃಷ್ಣನಾಯಕ | 27500 |
| 55 | ಶಾಂತಮ್ಮ ಬಿನ್ ರಂಗಸ್ವಾಮಿನಾಯಕ | 9000 |
| 56 | ಚಿಕ್ಕರಂಗನಾಯಕ ಬಿನ್ ಚಿಕ್ಕರಂಗನಾಯಕ | 8000 |
| 57 | ರತ್ನಮ್ಮ ಕೋಂ ಬಸವನಾಯಕ | 15000 |
| 58 | ನಾರಾಯಣನಾಯಕ ಬಿನ್ ಸುಬ್ಬನಾಯಕ | 15000 |
| 59 | ಪುಟ್ಟಲಿಂಗಮ್ಮ ಕೋಂ ಶಿವಯ್ಯಶೆಟ್ಟಿ | 27500 |
| 60 | ಚೌಡಮ್ಮ ಕೋಂ ಜೋಗನಾಯಕ | 8000 |
| 61 | ರುದ್ರಮ್ಮ ಕೋಂ ಶೇಖರನಾಯಕ | 12000 |
| 62 | ಟೈಲರ್ ಪುಟ್ಟಸ್ವಾಮಿನಾಯಕ ಬಿನ್ ರಂಗನಾಯಕ | 30500 |
| 63 | ದುಂಡಮ್ಮ ಕೋಂ ನಂಜನಾಯಕ | 10000 |
| 64 | ಚಿಕ್ಕರಂಗನಾಯ್ಕ ಬಿನ್ ಪುಟ್ಟರಂಗನಾಯಕ | 22500 |
| 65 | ಸುವರ್ಣಮ್ಮ ಕೋಂ ರಾಚಾಚಾರಿ | 8000 |
| 66 | ಮಹದೇವಮ್ಮ ಕೋಂ ಗುಳ್ಳೆ ಮಹದೇವನಾಯಕ | 37500 |
| 67 | ಚಿಕ್ಕೂಸನಾಯಕ ಬಿನ್ ರಂಗನಾಯಕ | 40000 |
| 68 | ರತ್ನಮ್ಮ ಕೋಂ ಮಹದೇವನಾಯಕ | 8000 |
| 69 | ಎಂ ಸಿದ್ದಲಿಂಗಸ್ವಾಮಿ ಬಿನ್ ಕೆ ಮಹದೇವಪ್ಪ | 8000 |
| 70 | ಬಸವಲಿಂಗಸ್ವಾಮಿ ಬಿನ್ ಶಿವಣ್ಣ ಹೆಚ್ ಎಸ್ | 10000 |
| 71 | ಜಯಮ್ಮ ಕೋಂ ರುದ್ರನಾಯಕ | 8000 |
| 72 | ಭಾಗ್ಯಮ್ಮ ಕೋಂ ರಾಚನಾಯಕ | 32500 |
| 73 | ಬಂಗಾರನಾಯ್ಕ ಬಿನ್ ಚಿಕ್ಕದಾಸನಾಯಕ | 12000 |
| 74 | ಚಿಕ್ಕತಾಯಮ್ಮ ಕೋಂ ಗುರುಸಿದ್ದನಾಯಕ | 12000 |
| 75 | ವೆಂಕಟಮ್ಮ ಬಿನ್ ರಂಗನಾಯಕ | 6000 |
| 76 | ಮಹದೇವಮ್ಮ ಕೋಂ ಮಹದೇವನಾಯಕ | 8000 |
| 77 | ನಂಜುಂಡನಾಯಕ ಬಿನ್ ಬಸವನಾಯಕ | 12000 |
| 78 | ಚಿನ್ನಮ್ಮ ಕೋಂ ಗೋವಿಂದನಾಯಕ | 8000 |
| 79 | ಮಹದೇವಮ್ಮ ಕೋಂ ಅಂಕಶೆಟ್ಟಿ | 8000 |
| 80 | ಕಲ್ಪನಾ ಕೋಂ ಹೆಚ್ ಆರ್ ರಾಚನಾಯಕ | 8000 |
| 81 | ರತ್ನಮ್ಮ ಕೋಂ ರಂಗಸ್ವಾಮಿನಾಯಕ | 8000 |
| 82 | ನಂಜಮ್ಮ ಕೋಂ ವೆಂಕಟರಂಗನಾಯಕ | 8000 |
| 83 | ಲಕ್ಷ್ಮೀದೇವಮ್ಮ ಕೋಂ ದಾಸನಾಯಕ | 12000 |
| 84 | ಲಕ್ಷ್ಮಮ್ಮ ಕೋಂ ಕಾಳನಾಯಕ | 32500 |
| 85 | ಮಹದೇವಮ್ಮ ಕೋಂ ವೆಂಕಟರಂಗನಾಯಕ | 12000 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ಹೆಸರು | ಮಂಜೂರು ಮಾಡಲಾದ ಮೊತ್ತ |
|---|---|---|
| 86 | ನಂಜುಂಡಸ್ವಾಮಿ ಬಿನ್ ರಾಮಚಂದ್ರನಾಯಕ | 12000 |
| 87 | ಬಸವರಾಜಮ್ಮ ಕೋಂ ನಂಜುಂಡನಾಯಕ | 8000 |
| 88 | ರಂಗಶೆಟ್ಟಿ ಬಿನ್ ರಂಗಶೆಟ್ಟಿ | 9000 |
| 89 | ಪುಟ್ಟಬಸಮ್ಮ ಕೋಂ ರಾಚನಾಯಕ | 12000 |
| 90 | ಚಂದ್ರಿಕಾ ಕೋಂ ರಂಗನಾಥ ಹೆಚ್ | 20000 |
| 91 | ಶ್ರೀನಿವಾಸನಾಯಕ ಬಿನ್ ವೆಂಕಟರಂಗನಾಯಕ | 20000 |
| 92 | ರಂಗಮ್ಮ ಕೋಂ ಬಿಳಿಗಿರಿರಂಗನಾಯಕ | 8000 |
| 93 | ಶಿವಶಂಕರ ಬಿನ್ ಚಿಕ್ಕಮಾದನಾಯಕ | 8000 |
| 94 | ನಂಜನಾಯಕ ಬಿನ್ ಬೊಕಳಿ ಬಸವನಾಯಕ | 9000 |
| 95 | ಮಂಜುನಾಥ ಬಿನ್ ಹೆಚ್ ಬಿ ಹುಚ್ಚನಾಯಕ | 9000 |
| 96 | ತಾಜುನ್ನೀಸಾ ಕೋಮ ರೆಹಮನುಲ್ಲಾ | 9000 |
| 97 | ನಿಂಗಮ್ಮ ಕೋಂ ವೆಂಕಟರಂಗನಾಯಕ | 8000 |
| | **ಒಟ್ಟು :–** | **₹. 17,04,500–00** |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ: ಆಇ:353:ವೆಚ್ಚ:11:2014, ದಿನಾಂಕ: 18.07.2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 435**

**S.C – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ).

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59